ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

# ಚೆಲುವು-ಒಲವು

ಜಿ. ಎಸ್. ಶಿವರುದ್ರಪ್ಪ



ಪ್ರಕಾಶಕರು:

ಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

ಮೂರ್ತಿಪುರಂ : : ಮೈಸೂರು

8K1.6
SHI

ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

# ಚೆಲುವು-ಒಲವು

ಜಿ. ಎಸ್. ಶಿವರುದ್ರಪ್ಪ


AKSHARA GRANTHALAYA
ACC.NO. 109027

ಪ್ರಕಾಶಕರು :
ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ
ಕೃಷ್ಣಮೂರ್ತಿಪುರಂ : : ಮೈಸೂರು

ಮೊದಲನೆಯ ಮುದ್ರಣ : ೧೯೫೩

ಎರಡನೆಯ ಮುದ್ರಣ : ೧೯೬೪

ಎಲ್ಲ ಹಕ್ಕುಗಳೂ ಗ್ರಂಥಕರ್ತರಿಗೆ ಸೇರಿವೆ

109027

ಸಂಪಾದಕರು ಮತ್ತು ಪ್ರಕಾಶಕರು

ತ. ಸು. ಶಾಮರಾಯ, ಎಂ.ಎ.

8K1·6

SHI C

ಸಾಧಾರಣ ಪ್ರತಿ ೧–೦೦]    [ಕ್ಯಾಲಿಕೊ ಪ್ರತಿ ೨–೦೦

ಮುದ್ರಕರು :

ಮಂಜುನಾಥ ಪ್ರಿಂಟರ್ಸ್,

ಚಾಮುಂಡಿಪುರಂ, ಮೈಸೂರು.

# ಅರಿಕೆ

ಗೆಳೆಯ ಶ್ರೀ ಶಿವರುದ್ರಪ್ಪನವರ ಈ ಎರಡನೆಯ ಕವನ ಸಂಗ್ರಹ "ಚೆಲುವು-ಒಲವು" ನ್ನು ಕನ್ನಡ ವಾಚಕವೃಂದಕ್ಕೆ ಕಾಣಿಕೆಯಾಗಿ ಅರ್ಪಿಸುವ ಸದವಕಾಶ ದೊರೆತುದಕ್ಕಾಗಿ ನನಗೆ ತುಂಬ ಸಂತೋಷವಾಗಿದೆ. ಪ್ರಕೃತಿ ಸಾನ್ನಿಧ್ಯದಲ್ಲಿ ನಿಂತು 'ಸಾಮಗಾನ' ವನ್ನು ಹಾಡಿದ ಕವಿಚೇತನ ಇಲ್ಲಿ ಇನ್ನೂ ವಿಶಾಲ ಜಗತ್ತಿನ, ಮಧ್ಯದಲ್ಲಿ ನಿಂತು ಅದರ ಚೆಲುವು ಒಲವುಗಳನ್ನು ನಿರೀಕ್ಷಿಸತೊಡಗಿದೆ. ಮಹೋನ್ನತ ವೃಕ್ಷವೊಂದು ಅಂಬರದಲ್ಲಿ ಅರಳುವ ಮುನ್ನ ಭೂಮಿಯಮೇಲೆ ನಾಟಿ ಸಿಲ್ಲಬೇಕು; ಹತ್ತಾರು ಕಡೆ ಬಿಳಲು ಬಿಡಬೇಕು, ನೂರಾರು ಕಡೆ ಬೇರುಗಳನ್ನು ಹರಡಿ ಆಹಾರವನ್ನು ಸಂಗ್ರಹಿಸಬೇಕು. ಶ್ರೀ ಶಿವರುದ್ರಪ್ಪನವರ ಕವಿಚೇತನ ಅಂತಹ ಪ್ರಗತಿಪಥದಲ್ಲಿ ಮುಂದುವರಿಯುತ್ತಿದೆ ಎಂದು ಹೇಳಿದರೆ ತಪ್ಪಾಗಲಾರದು.

ಈ ಮುದ್ದಾದ ಕವನ ಸಂಗ್ರಹವನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಅನುಮತಿಯಿತ್ತ ಕವಿ ಶಿವರುದ್ರಪ್ಪನವರಿಗೂ, ವಿಚಾರಪೂರ್ಣವಾದ ರಸವಿಮರ್ಶಾರೂಪದ ಮುನ್ನುಡಿಯೊಂದರಿಂದ ಗ್ರಂಥದ ಬೆಲೆಯನ್ನು ಹೆಚ್ಚಿಸಿರುವ ಕವಿವರ್ಯ ಪು. ತಿ. ನ. ರವರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ಅತ್ಯಲ್ಪ ಕಾಲದಲ್ಲಿ ಅಂದವಾಗಿ ತಪ್ಪಿಲ್ಲದಂತೆ ಮುದ್ರಿಸಲು ಸಹಾಯಕರಾದ ಎಲೈಟ್ ಮುದ್ರಣಾಲಯದವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ವಿಜಯ ಸಂ|| ವಿನಾಯಕ ಚತುರ್ಥಿ
ಮೈಸೂರು

ತ. ಸು. ಶಾಮರಾಯ
ಸಂಪಾದಕ

ಮೊದಲನೆಯ ಮುದ್ರಣದ ಪ್ರತಿಗಳೆಲ್ಲವೂ ಮಾರಾಟವಾಗಿ ಹೋಗಿ ಬಹುಕಾಲವಾಯಿತು. ಇದು ಎರಡನೆಯ ಮುದ್ರಣ. ಈ ಮುದ್ರಣಕ್ಕೆ ಅನುಮತಿಯನ್ನು ನೀಡಿದ ಗ್ರಂಥಕರ್ತರಿಗೂ ಮತ್ತು ಅಂದವಾಗಿ ಸಕಾಲದಲ್ಲಿ ಮುದ್ರಿಸಿಕೊಟ್ಟ ಮಂಜುನಾಥ ಮುದ್ರಣಾಲಯದವರಿಗೂ ನಾನು ಕೃತಜ್ಞ.

ಜನವರಿ
೧೯೬೪

ತ. ಸು. ಶಾಮರಾಯ
ಸಂಪಾದಕ

# ನನ್ನ ಬಿನ್ನಪ

‘ಸಾಮಗಾನ’ದ ನಂತರ ಈ ನನ್ನ ‘ಚೆಲುವು-ಒಲುವು’ ಸಹೃದಯರ ಮುಂದೆ ಬರುತ್ತಿರುವುದು ನನಗೇ ಸೋಜಿಗ! ನನ್ನ ಪಾಲಿಗೆ ದೊರೆತ ಈ ಅನಿರೀಕ್ಷಿತಾನಂದಕ್ಕೆ ಕಾರಣರಾದವರು ನನ್ನ ಪ್ರಿಯ ಗುರುಗಳಾದ ಶ್ರೀ ತ. ಸು. ಶಾಮರಾಯರು. ಅವರ ನಿರಂತರ ವಾತ್ಸಲ್ಯದ ನೆಳಲಿನ ಆಸರೆ, ಮತ್ತು ನನ್ನ ಒಲವಿನ ಗೆಳೆಯರ ಸ್ನೇಹ ಮಂದಾನಿಲದ ಆರೈಕೆ, ಇವು ನನ್ನ ಬಿರುಬಿಸಿಲಿನ ಹಾದಿಯಲಿಲ್ಲದಿದ್ದರೆ ಈ ಕವನಗಳು ಬಹುಶಃ ಬೆಳಕಿಗೆ ಬರುತ್ತಿರಲಿಲ್ಲವೆಂದು ತೋರುತ್ತದೆ. ಇದರ ಯಶಸ್ಸೆಲ್ಲಾ ಅವರಿಗೆ ಸಲ್ಲಬೇಕು. ಏಕೆಂದರೆ ಉಸಿರೆಲ್ಲ ಅವರದು; ಹೆಸರು ಮಾತ್ರ ನನ್ನದು!

ಅವ್ಯಾಜ ಪ್ರೇಮದ ಮೂರ್ತಿಗಳಾದ ಶ್ರೀ ಪು. ತಿ. ನರಸಿಂಹಾಚಾರ್ಯರು ಬೋಧಪ್ರದವಾದ ಮುನ್ನುಡಿಯನ್ನು ಬರೆದು ಹರಸಿದ್ದಕ್ಕಾಗಿ ನಾನು ಅವರಿಗೆ ಕೃತಜ್ಞ. ಈ ಪುಸ್ತಕದ ಪ್ರಕಾಶನಕ್ಕೆ ನಾನಾ ಬಗೆಯಲ್ಲಿ ನೆರವಾದ ಸ್ನೇಹ ಜೀವಿಗಳನ್ನು ಮೌನವಾಗಿ ಸ್ಮರಿಸುತ್ತೇನೆ.

ಮೈಸೂರು,
೧೨—೯—೧೯೫೩.

ಜಿ. ಎಸ್. ಶಿವರುದ್ರಪ್ಪ

# ಮುನ್ನುಡಿ

ಶ್ರೀಮಾನ್ ಶಿವರುದ್ರಪ್ಪನವರ ಕವನಗಳು ತಮ್ಮ ಬಾಹ್ಯ ಸೌಂದರ್ಯ ದಿಂದಲೂ ಬಗೆಯ ಕಾಂತಿಯಿಂದಲೂ ಸಹೃದಯರ ಮನಸ್ಸನ್ನು ಸೆಳೆದು ಈ ತರುಣ ಕವಿಗಳಿಗೆ ಯಶಸ್ಸನ್ನು ಈಗಾಗಲೇ ತಂದಿವೆ. ಈ ಕವನ ಸಂಗ್ರಹದಿಂದ ಈ ಯಶಸ್ಸು ವೃದ್ಧಿಯಾಗುತ್ತದೆಂಬ ವಿಷಯದಲ್ಲಿ ನನಗೆ ಸಂದೇಹವಿಲ್ಲ. ಕವನಗಳ ಸೊಗಸು ಅಂಥದು; ಅವನ್ನು ಪಡೆದ ಮನಸ್ಸು ಸುಸಂಸ್ಕೃತವಾದದ್ದು, ಕೋಮಲವಾದದ್ದು, ಪರಿಸರಸಂವೇದಿಯಾದದ್ದು ಮತ್ತು ರಸವನ್ನು ವಿಷಯಗಳ ಮುಖೇನ ಎತ್ತಿಕೊಡುವ ಸಾಮರ್ಥ್ಯ ವುಳ್ಳದ್ದು. ಈ ಸಂಗ್ರಹದಲ್ಲಿನ ಕೆಲವು ಪದ್ಯಗಳು ನನ್ನ ಮನಸ್ಸನ್ನು ಹಿಡಿದಿಟ್ಟ ರೀತಿಗೆ ನಾನು ಬೆರಗುಗೊಂಡಿದ್ದೇನೆ. ಅವು "ರಸ"ದ ವಿಷಯ ದಲ್ಲಿ ಕೆಲವು ಆಲೋಚನಾ ತರಂಗಗಳನ್ನು ಎಬ್ಬಿಸಿವೆ.

ಈ "ರಸ"ವೆನ್ನುವುದೇನು ? ಇದೊಂದು ಮನಃಸ್ಥಿತಿ. ಮನಸ್ಸನ್ನು ಒಂದು ತೆರದ ಸ್ವಾಸ್ಥ್ಯಕ್ಕೆ ತರುವುದು, ಆ ಹದದಲ್ಲಿ ನಿಲ್ಲುವಂತೆ ಮಾಡು ವುದು, ಅದರ ಆಳ ವಿಸ್ತಾರಗಳನ್ನು ಹೆಚ್ಚಿಸುವುದು—ಇದು ಅಷ್ಟು ಸುಲಭ ವಾದ ಕೆಲಸವಲ್ಲ. ಅದೊಂದು ಬ್ರಹ್ಮವಿದ್ಯೆ. ಏಕೆಂದರೆ: "ಅಸಂಶಯಂ ಮಹಾಬಾಹೋ, ಮನೋ ದುರ್ನಿಗ್ರಹಂ ಚಲಂ" ಎಂಬ ಗೀತಾ ಮಹಾ ವಾಕ್ಯ ಸತ್ಯ. ಅದು ನಿಂತೆಡೆ ನಿಲ್ಲದು; ಅದರ ಸಂಘಟನೆ ಬಹಳ ಕಷ್ಟ. ನೀರಿಲ್ಲದೆ ಹೇಗೆ ಜೀವ ಬಾಳಲಾರದೋ ಹಾಗೆಯೇ ಮನಸ್ಸಿಲ್ಲದೆ ಆತ್ಮ ಬದುಕಿ ಬಾಳಲಾರದು. ಒಂದು ಲಭ್ಯವಾಗುವಷ್ಟೂ ಇನ್ನೊಂದರ ಸಮೃದ್ಧಿ ಹೆಚ್ಚುತ್ತದೆ. ಆದುದರಿಂದ ಚಲಿಸುವ ಮನಸ್ಸಿನ ಚಲನವನ್ನು ಪಳಗಿಸಿ ಸ್ಥಿಮಿತಕ್ಕೆ ತಂದು ಮಡುಗಟ್ಟುವಂತೆ ನಿಲ್ಲಿಸುವ ಕುಶಲಿಯನ್ನು ಮನುಷ್ಯ ವರ್ಗವೇ ಆದರಿಸುತ್ತದೆ. ಇಂಥ ಕುಶಲ ಶಿಲ್ಪಿಗಳ ವರ್ಗಕ್ಕೆ ಸೇರಿದವನು ಕವಿ. ಅವನ ಕಾವ್ಯದಿಂದ ನಾವು ಬಯಸುವುದು ಆತ ನಮ್ಮ ಚಲ ಮನಸ್ಸಿನ ಚಲನವನ್ನು ಭಾವಗಳಿಂದ ಪಳಗಿಸಿ ರಸದಲ್ಲಿ ಸ್ಥಿಮಿತಗೊಳಿಸುವ ಸಾಮರ್ಥ್ಯವನ್ನು. ಆ ಸಾಮರ್ಥ್ಯವುಳ್ಳವನ ಕಲೆ, ರತ್ನ ಬೆಳಕನ್ನು

ಹೇಗೋ ಹಾಗೆ, ನಮ್ಮ ಮನಸ್ಸನ್ನು ಸೆರೆಹಿಡಿಯುತ್ತದೆ—ಅಂದರೆ ನಮ್ಮ ಮನಸ್ಸನ್ನು ನಿಜವಾಗಿಯೂ ನಮ್ಮದನ್ನಾಗಿ ಮಾಡುತ್ತದೆ. ನಮ್ಮ ಮನಸ್ಸನ್ನು ನಮಗೆ ತಂದೊಪ್ಪಿಸುವುದಕ್ಕೆ ಕವಿ ಹುಡುಕುವ ವಿಷಯ ತಂತ್ರಗಳೇ ಆತನ ಕಾವ್ಯ. ಶ್ರೀಮಾನ್ ಶಿವರುದ್ರಪ್ಪನವರ ಪದ್ಯಗಳನ್ನು ಉದಾಹರಣೆಗೆ ತೆಗೆದುಕೊಂಡು ಈ ಜಿಜ್ಞಾಸೆಯನ್ನು ಸ್ವಲ್ಪ ಮುಂದು ವರಿಸಬಹುದು.

"ನೋಡು ಇದೊ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸರು ಗಿಡದಿಂ-
ದೆಂತು ಮೂಡಿತು ಬೆಳ್ಳಗೆ !"

ಮುಕ್ತಕದಂಥ ಮಾತು. ಈ ಕವನದಲ್ಲಿ ಬೇರೆ ಪದ್ಯಗಳಿಲ್ಲದೆ ಇದೊಂದೇ ಇದ್ದರೂ ಈ ನಾಲ್ಕು ಸಾಲುಗಳು ನಮ್ಮ ಮನಸ್ಸನ್ನು ತಡೆ ದಿಡುವ ಸಾಮರ್ಥ್ಯಕ್ಕೆ ಕುಂದು ಬರುತ್ತಿರಲಿಲ್ಲ. ಮಿಕ್ಕ ಸಾಲುಗಳಿಂದ ಈ ಆಶ್ಚರ್ಯಭಾವಕ್ಕೆ ಅಷ್ಟು ಪೋಷಣೆ ದೊರೆತಿಲ್ಲವೆಂದು ಹೇಳಬಹುದು. ಈ ವ್ಯಂಗ್ಯಾರ್ಥವನ್ನು ವಾಚ್ಯಕ್ಕೆ ತಿರುಗಿಸಲು ಹವಣಿಸಿ ಆ ಉಪಮೆಗಳೂ ತಮ್ಮ ಪ್ರಾಧಾನ್ಯವನ್ನು ಕಳೆದುಕೊಂಡಿರುವಂತೆ ತೋರುತ್ತದೆ. ಈಗ "ಅಲೆಗಳು" ಎಂಬ ಪದ್ಯವನ್ನು ತೆಗೆದುಕೊಳ್ಳಿ. ಎಷ್ಟು ಸುಂದರವಾದ ಕವನ. "ಕೆರೆಯ ಮನಸು ದಡಕೆ ನುಡಿವ ತುಂಬೊಲವಿನ ನುಡಿಗಳೇ" ಎನ್ನುವಂಥ ಸಂಬೋಧನೆಗಳು ಎಷ್ಟು ರಮ್ಯವಾಗಿವೆ! ಆದರೆ ಈ ಕವನದಲ್ಲಿ ಕೊನೆಯ ಏಳು ಸಾಲುಗಳೂ ಮತ್ತು "ಆದರಯ್ಯೊ ಕಲ್ಲುದಡದ ಎದೆಗೆ ಬರಿದೆ ಬಡಿವಿರಿ" ಎಂಬ ಕನಿಕರದ ಭಾವವನ್ನು ವಾಚ್ಯಕ್ಕಿಳಿಸುವ ಸಾಲು ಗಳೂ ಇಲ್ಲದಿದ್ದರೆ ಈ ಕವನ ಎಷ್ಟೊಂದು ಶಕ್ತವಾಗುತಿತ್ತು ! ಹೀಗೆ ಒಂದು ಸಾಲನ್ನು ಕಳೆದುಕೊಂಡರೆ ರಮ್ಯತರವಾಗುವ ಮತ್ತೊಂದು ಪದ್ಯ "ಸುಂಟರಗಾಳಿ" ಎಂಬ ಪದ್ಯ. "ಗಾಂಧೀಜಿಯ ವ್ಯಕ್ತಿತೆಯಲಿ ಮೇಲೆದ್ದಾ ಜನತೆಯೊಲು" ಎಂಬಲ್ಲಿ ಆ ಪದ್ಯಕ್ಕೆ ಪದ್ಯವೇ ಧ್ವನಿಸುತಿದ್ದ ಭಾವ ವಾಚ್ಯ ವಾಗಿ ಅದರ ಸಾಮರ್ಥ್ಯವನ್ನು ಕುಂಠಿಸುತ್ತದೆ. ಇಂಥ ಪದ್ಯಗಳಲ್ಲಿ ಕವಿಗೆ "ಎಲ್ಲಿ ನನ್ನ ಭಾವವನ್ನು ಸಹೃದಯರು ಗ್ರಹಿಸುವುದಿಲ್ಲವೋ" ಎಂಬ ಆತಂಕ

ಕಾವ್ಯಸಮಾಧಿಗೆ ಅಡ್ಡ ಬಂದು ಆ ಸಮಾಧಿಯನ್ನು ತುಸ ಚಲಿಸುವಂತೆ ಮಾಡಿದೆ ಎನ್ನಬಹುದು. ಇನ್ನು "ಕ್ರಾಂತಿಕಾರ" ಎಂಬ ಮತ್ತೊಂದು ಮನೋಹರವಾದ ಪದ್ಯವನ್ನು ನೋಡೋಣ. ಅಲ್ಲಿ ಈ ಆತಂಕದ ಸುಳಿವಿಲ್ಲ. ಆ ಪದ್ಯದ ಸಮಗ್ರಭಾವ ಯಾವ ಒಂದು ಸಾಲಿನಲ್ಲೂ ಮಡುಗಟ್ಟಿಸಿಲ್ಲದೆ, ಸಾಲು ಸಾಲಿನಿಂದಲೂ ಭಾವ ಪ್ರವಾಹಗಳನ್ನು ಕೊಂಡು, ಸಮಗ್ರ ಪದ್ಯದಲ್ಲಿ ಮಡುಗಟ್ಟಿ ನಿಂತಿದೆ. ಸುಂದರವಾಗಿ ವ್ಯಾಖ್ಯಾನವನ್ನು ಬೇಡುವ ಪಂಕ್ತಿಗಳಿಗೂ ಇಲ್ಲಿ ಕೊರತೆಯಿಲ್ಲ.

'ಅದೊಬಂದ ಇವನೊಂದು ಕಿರಿಯ ಬಿರುಗಾಳಿ
ಮನೆಯ ಒಳಗೂ ಹೊರಗು ಇವನದೇ ದಾಳಿ'

ಎಂದು ಪ್ರಾರಂಭವಾಗಿ

"ಹೊಳೆವೆಳೆಯ ಕಂಗಳಲಿ ಬೆಳುದಿಂಗಳನು ತುಂಬಿ
ತಂದು ಮನೆಯಂಗಳಕೆ ಸುರಿವ ಧೀರ"

* * * *

"ಚಂದು ಮಾಮನ ಅಳಿಯ"(ಈ ಅರ್ಧಸಾಲು ನನಗೆ ನಿಜವಾಗಿಯೂ ಪುಲಕವನ್ನು ತಂದಿತು)

* * * *

"ಇವ ಮಾಯಕಾರ
ಎರಡು ಬಾಳನು ಬೆಸೆದ ಸೂತ್ರಧಾರ"

ಎಂಬಲ್ಲಿಗೆ ಮುಗಿಯುವ ಈ ಬಂಧುರ ಕವನ ತನ್ನ ಪಂಕ್ತಿ ಪಂಕ್ತಿಗಳಲ್ಲಿ ತರುವ ಸುಖ ಒಂದು ತೆರದ್ದು ; ವಿಶ್ರಮಿಸಿದ ಮೇಲೆ ತರುವ ಸುಖ ಮತ್ತೊಂದು ತೆರದ್ದು. ಈ ಪದ್ಯದಲ್ಲಿ 'ಸಂಘಾತ' ವೆಂಬ ಅಮೋಘವಾದ ಗುಣವಿದೆ. "ಕಟ್ಟಿಗೆಯಮೇಲೆ ಕಟ್ಟಿಗೆಯನ್ನಿಟ್ಟರೆ ಹೇಗೆ ಪೆಟ್ಟಿಗೆಯಾಗುವುದಿಲ್ಲವೋ" ಹಾಗೆಯೇ ಭಾವದ ಮೇಲೆ ಭಾವಗಳನ್ನು ಪೇರಿಸಿದರೂ ರಸಸ್ಥಿತಿಯೊದಗುವುದಿಲ್ಲ. ಸುಸಂಘಟಿತವಾದ ಭಾವಗಳಿಂದಲೇ ರಸದ ಪ್ರಾಪ್ತಿ.

ಶ್ರೀ ಶಿವರುದ್ರಪ್ಪನವರ ಕವನಗಳ ಮೂಲದಲ್ಲಿ ರಸಸ್ಥಿತಿಯನ್ನು ರಚಿಸುವ ಸತತ ಪ್ರೇರಣೆಯಿದೆ. ಈ ಸಂಗ್ರಹದ ಕವನಗಳಲ್ಲಿ ನಮ್ಮ ಮನಸ್ಸನ್ನು ತನ್ನ ಚೆಂದದಿಂದ ತಡೆಗಟ್ಟುವ ಸಾಲುಗಳನ್ನೆರಚುತ್ತಾ ಆ ಪ್ರೇರಣೆ ಲಾಸ್ಯವಾಡುತ್ತಿದೆ. ಅನೇಕ ಕವನಗಳಲ್ಲಿ ಸಿದ್ಧಿಯನ್ನೂ ಪಡೆದಿದೆ. ಮಳೆ, ಮನದನ್ನೆ, ತಾಯಿ ತನ್ನ ಮಗುವಿಗೆ, ಕ್ರಾಂತಿಕಾರ, ಬಂಡೆ-ಹೂವು, ಸಂಕ್ರಾಂತಿ, ಜಡೆ—

> 'ಎಲ್ಲವೂ ರಮ್ಯವೆಲ್ಲ !
> ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ
> ಕಾಣದಲ್ಲ !'

ಎಂಬ ಸಖೇದಾಶ್ಚರ್ಯ ಭಾವದಲ್ಲಿ ಮುಗಿಯುವ ಭವ್ಯೋಪಪೂರ್ಣವಾದ "ಜಡೆ'—ಇಂಥ ರಸಪದಕ್ಕೇರುವ ಎಷ್ಟೊಂದು ಪದ್ಯಗಳನ್ನು ನಾವು ಶಿವರುದ್ರಪ್ಪನವರ ಕಾವ್ಯ ಕೋಶಾಗಾರದಲ್ಲಿ ಕಾಣಲಾರೆವು !

ಹೀಗೆ "ಹರಿವ ಮನವನು ಹಿಡಿದು ಒಂದೆಡೆ ನಿಲಿಸಿ"ಕೊಳ್ಳುವ ಪದ್ಯಗಳನ್ನು ರಚಿಸಿರುವ ಶ್ರೀಮಾನ್ ಶಿವರುದ್ರಪ್ಪನವರನ್ನು ಭಾವುಕ ಲೋಕ ಆದರಿಸಿ ಅಭಿನಂದಿಸುವುದರಲ್ಲಿ ಅನುಮಾನವಿಲ್ಲ. ಅಂಥ ಅಭಿನಂದನೆಗಳನ್ನು ಸಲ್ಲಿಸುವವರಲ್ಲಿ ನಾನು ಮೊದಲಿಗನಾಗುವ ಸಂತೋಷಕ್ಕೆ ಶ್ರೀಮಾನ್ ಶಿವರುದ್ರಪ್ಪನವರೂ ಮತ್ತು ಅವರ ಪ್ರಿಯಮಿತ್ರರಾದ ಶ್ರೀ ಪ್ರಭುಶಂಕರರು ನನ್ನಲ್ಲಿಟ್ಟಿರುವ ಮಮತೆಯೇ ಕಾರಣ. ಈ ಕಾವ್ಯದಿಂದ ಕವಿ ಯಶಸ್ಸನ್ನೂ, ಪ್ರಕಾಶಕರು ಉಲ್ಲಾಸವನ್ನೂ, ಸಹೃದಯರು ಆನಂದವನ್ನೂ ಪಡೆಯಲೆಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.

೮—೯—೧೯೫೩ ಪು. ತಿ. ನ.

## ಪರಿವಿಡಿ

# ಮಲ್ಲಿಗೆ

ನೋಡು ಇದೊ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ.
ಇಷ್ಟು ಹಚ್ಚನೆ ಹಸುರ ಗಿಡದಿಂ–
ದೆಂತು ಮೂಡಿತೊ ಬೆಳ್ಳಗೆ!

ಮೇಲೆ ನಭದಲಿ ನೂರು ತಾರೆಗ–
ಳರಳಿ ಮಿರುಗುವ ಮುನ್ನವೆ
ಬೆಳ್ಳಿಯೊಂದೇ ಬೆಳಗುವಂದದಿ
ಗಿಡದೊಳೊಂದೇ ಹೂವಿದೆ.

ಸತ್ವಶೀಲನ ಧ್ಯಾನಮೌನವೆ
ಅರಳಿ ಬಂದೊಲು ತೋರಿದೆ!
ಒಲವು ತುಂಬಿದ ಮುಗುದೆಯೆದೆಯಿಂ–
ದೊಗೆದ ನಲ್ನುಡಿಯಂತಿದೆ.

ಕವಿಯ ಮನದಿಂದುದಿಸಿ ಮೆಲ್ಲನೆ
ಅರಳಿ ಬರುವೊಲು ಕಲ್ಪನೆ,
ಎಂಥ ನವುರಿನ ಕುಶಲ ಕಲೆಯಿದು
ತನಗೆ ತಾನೇ ಮೂಡಿದೆ.

ಮೌನದಲಿ ಮೊಳೆಯುತ್ತ ಮೆಲ್ಲನೆ
ತನಗೆ ತಾನೇ ತಿಳಿಯದೆ
ಮೊಗ್ಗಿನಲಿ ಮಲಗಿದ್ದ ಚೆಲುವಿದು
ಇಂದು ಕಣ್ಣನು ತೆರೆದಿದೆ.

ಎನಿತು ನವುರಾಗಿಹವು ದಳಗಳು
ಹಸುಳೆ ಕಾಣುವ ಕನಸೊಲು!
ಏನು ಇಂಪಿನ ಕಂಪು ಇದರದು
ಆ ಮಹಾತ್ಮರ ಮನದೊಲು

ಹರಿವ ಮನವನು ಹಿಡಿದು ಒಂದೆಡೆ
ನಿಲಿಸಿ ತೊಳೆದಿದೆ ಹೂವಿದು.
ಚೆಲುವು ಬಾಳನು ಹಸನುಗೊಳಿಸುವ
ಅಚ್ಚರಿಯ ಪರಿ ಎಂಥದು!

# ಹೂಬಳ್ಳಿ

ಯಾರೂ ತುಳಿಯದ ಹಾದಿಯ ಬದಿಯಲಿ
ಮೌನದೊಳಿರುವಳು ಈ ಚೆಲುವೆ.
ಪ್ರಕೃತಿಯ ಸುಂದರ ಹಂದರದಲ್ಲಿ
ವಧುವಾಗಿರುವಳು ಈ ಮುಗುದೆ!

ಹಕ್ಕಿಯ ಇನಿದನಿಯುಂಡವಳಿವಳು
ಸಗ್ಗದ ಕಂಬನಿ ಕುಡಿದವಳು.
ಹೂಗಿರಣದ ಮೃದು ಚುಂಬನದಲ್ಲಿ
ತುಟಿಯನು ಅರಳಿಸಲರಿತವಳು.

ಮೃದುಗಾಳಿಯ ಮರ್ಮರ ನಾದದಲಿ
ಬಳುಕುತ ಲಾಸ್ಯವನಾಡುವಳು.
ದೂರದ ದುಂಬಿಯ ಗುಂಜಾ ರವವನು
ಮೆಲ್ಲನೆ ತನ್ನೆಡೆ ಸೆಳೆದವಳು!

ಈಕೆಯ ಮೈ ಹೊಸಮಳೆಯಲಿ ಮಿಂದಾಗ
ಸ್ವರ್ಗವೆ ಎದೆಯೊಳು ಮೂಡುವುದು.
ಈಕೆಯ ಸೊಬಗಿಗೆ ಕಾಮನಬಿಲ್ಲೂ
ಬಾಗುತ ಮುತ್ತನ್ನೊತ್ತಿಹುದು.

ಈಕೆಯ ಹೆಸರನು ಕೇಳುವೆಯೇನು?
ಇಂತಹ ಚೆಲುವಿಗೆ ಹೆಸರೂ ಊನ!
ಚೆಲುವಿಗೆ ಚೆಲುವೆನ್ನದೆ ಮತ್ತೇನು?
ಮೌನದೊಳೊಲಿವುದೆ ಸನ್ಮಾನ!

# ಒಂದಿರುಳು

ನೋಡಿದೆಂತಹ ಬೆಳಕು! ಬಾನು ತನ್ನೆದೆ ತೆರೆದು
ಬೆಳಕೆಲ್ಲವನು ಹೊರಗೆ ತುಳುಕಿದಂತೆ!
ಬಾನೊಳೊಬ್ಬನೆ ಚಂದ್ರ; ತನ್ನ ಸೃಷ್ಟಿಯ ರಸದೊ-
ಳಾನಂದದಲಿ ತೇಲ್ವ ರಸಿಕನಂತೆ!
ಹಾಲ್ ಬೆಳಕಿನಲಿ ಮಿಂದು ಧನ್ಯವಾದಂತರಿಲು
ದೂರದಲಿ ಮಿನುಗುತಿವೆ ತೃಪ್ತಿಯಂತೆ.

ಇರುಳ ತಾಯಿಯ ಕೊರಳ ಮಾಂಗಲ್ಯದಿಂದಿಳಿದ
ಹೊಳಹಿನೊಲು ಎಲ್ಲೆಲ್ಲು ಬೆಳಕಾಗಿದೆ!
ಏನು ಸೋಜಿಗವಯ್ಯ! ಬೆಳಕು ತುಳುಕುವ ಬಾನಿ-
ನಡಿಯಲ್ಲಿ ಜಗವೆನಿತು ಕಿರಿದಾಗಿದೆ!
ಹಾಲ್ ಕುಡಿವ ಶಿಶು ಬಿಸುಟ ಬಣ್ಣದಾಟದ ವಸ್ತು-
ಗಳ ತೆರದಿ ಊರೆಲ್ಲ ತೋರುತ್ತಿದೆ!

# ಪ್ರಕೃತಿ—ಕವಿ

ವ್ಯೋಮಕೇಶನಿಂದ ಗಂಗೆ
ಭಗೀರಥನ ಹತ್ತಿರ
ಇಳಿದು ಬಂದಹಾಗೆ ಪ್ರಕೃತಿ
ಬಂತು ಕವಿಯ ಹತ್ತಿರ.

ಆದುವರೆಗೂ ಪಡೆಯದಿದ್ದ
ತೃಪ್ತಿಯನ್ನು ಪಡೆಯಿತು
ಕವಿಯ ಕೊಳಲಿನಲ್ಲಿ ತಾನೆ
ಲಹರಿ ಲಹರಿ ಹೊಮ್ಮಿತು.

*     *

ನೂರು ರೀತಿಯಲ್ಲಿ ಪ್ರಕೃತಿ
ವ್ಯಕ್ತಗೊಳ್ಳಲೆಳಸಿತು.
ತನ್ನ ಎದೆಯ ಭಾವಗಳನು
ನುಡಿದು ತೋರಬಯಸಿತು.

ಮಿಂಚಿನಲ್ಲಿ ನಗೆಯ ಬೀರಿ
ಗುಡುಗಿನಲ್ಲಿ ದನಿಯ ತೋರಿ
ಮಳೆಯ ನೂಲಿನೇಣಿಯಿಂದ
ತಿರೆಯ ಎದೆಗೆ ಇಳಿಯಿತು.
ನೆಲದೊಳಿಳಿದ ಮುಗಿಲ ಮನಸು
ಹಸುರಿನಲ್ಲಿ ಹೊಮ್ಮಿತು.
ಆದರ ಎದೆಯ ಹೊನ್ನ ಕನಸು
ಚಿಗುರು ಹೂಗಳಾಯಿತು.
ಹಣ್ಣು ಹಂಪಲಾಯಿತು.

ಜಗಕೆ ಅನ್ನವಾಯಿತು
ಋತುಗಾನದ ಛಂದದಲ್ಲಿ
ಕುಣಿ ಕುಣಿಯುತ ಬಂದಿತು
ನೂರು ಬಗೆಯ ಅಚ್ಚರಿಗಳ
ರಸದ ಕೋಶವಾಯಿತು !

ಹಕ್ಕಿಗೊರಲಿನಲ್ಲಿ ಪ್ರಕೃತಿ
ವಿವಿಧ ಮಧುರ ರಾಗವಾಗಿ
ಹೊಮ್ಮಲೆಳಸಿ ಸೋತಿತು.
ಗಾಳಿಯೊಡನೆ ವಿಶ್ವವನ್ನೆ
ಸುತ್ತಿ ಸುಳಿದುದಾಯಿತು.
ಆದರೇನು, ತೃಪ್ತಿಯಿನಿತು
ದೊರೆಯದಾಯ್ತು ಪ್ರಕೃತಿಗೆ
ಮೂಕಮೌನ ಶೋಕವೊಂದೆ
ತುಂಬಿಬಂತು ಮನಸಿಗೆ.
ನನ್ನ ಎದೆಯನರಿತು ಮಿಡಿದು
ನುಡಿಸಬಲ್ಲನಿರುವನೆ ?
ನನ್ನ ನಾನು ವ್ಯಕ್ತಗೊಳಿಸ—
ದಿರಲು ಬದುಕಬಲ್ಲೆನೆ ?
ಎಂಬಚಿಂತೆಯಲ್ಲಿ ಪ್ರಕೃತಿ
ಹಾರೈಸಿತು ದಿನದಿನ
ತಪಗೈಯಿತು ದಿನದಿನ !

ಪ್ರಕೃತಿಯಿಂತು ತಪವನೆಸಗಿ
ದಿನದಿನವೂ ಕಾದಿರೆ
ಕಡೆಗೆ ಸಫಲವಾಯ್ತು ತಪಸು
ಎದೆಯ ಕನಸದಾಯ್ತು ನನಸು

ಬೆರಗಾಗಿರೆ ಈ ಧರೆ
ಜಗದ ಜಟಿಲಜಾಲದಲ್ಲಿ
ಸಾಮಾನ್ಯರ ಕೂಟದಲ್ಲಿ
ಕಂಡಿತೊಬ್ಬ ವ್ಯಕ್ತಿಯು!
ದಾರಿದ್ರ್ಯದಿ ನೊಂದರೂ
ಕಣ್ಣೀರೊಳು ಮಿಂದರೂ
ಸೌಂದರ್ಯದ ಆರಾಧನೆ–
ಯಲ್ಲಿ ತೊಡಗಿ ತಪಗೈಯುವ
ಮನುಜನೆದೆಯ ಶಕ್ತಿಯು.

ಇಳಿದುಬಂತು ಪ್ರಕೃತಿಯ ಕೃಪೆ
ಮನುಜನೆದೆಯ ಗುಡಿಯೆಡೆ!
ನನ್ನ ನೀನು ವ್ಯಕ್ತಗೊಳಿಸಿ
ನೀಡು ನನಗೆ ಬಿಡುಗಡೆ.
ನನಗೆಮಾತ್ರವಲ್ಲಕಾಣೊ
ನಿನಗೂ ಅದು ಬಿಡುಗಡೆ
ಎಂದು ಬೇಡಿತವನನು
ಆಶ್ರಯಿಸಿತು ಕವಿಯನು.

* *

ಸಫಲವಾಯ್ತು ಪ್ರಕೃತಿಯೆದೆಯ
ಬಹುಕಾಲದ ಸಾಧನೆ.
ಸಫಲವಾಯ್ತು ಕವಿದೃಷ್ಟಿಯ
ಸೌಂದರ್ಯಾರಾಧನೆ.
ತನ್ನ ಬಳಿಗೆ ಹರಿದು ಬಂದ
ಕೃಪೆಗೆ ಮುಡಿಯ ಬಾಗಿಸಿ
ತನ್ನತನವನದರ ಎದೆಯ
ವಾಣಿಯಲ್ಲಿ ಕರಗಿಸಿ

ಜಗಕೆ ಹಾಡುತಿರುವನಿಲ್ಲಿ
ನೂರು ಮಧುರ ಸ್ವರದಲಿ
ಕವಿಯು ಹಾಡ ಕೇಳಿ ಲೋಕ
ಬೆರಗಾಗಿದೆ ಮನದಲಿ !

* *

ವ್ಯೋಮಕೇಶನಿಂದ ಗಂಗೆ
ಭಗೀರಥನ ಹತ್ತಿರ
ಇಳಿದು ಬಂದಹಾಗೆ ಪ್ರಕೃತಿ
ಬಂತು ಕವಿಯ ಹತ್ತಿರ

# ಸುಂಟರಗಾಳಿ

ತರಗೆಲೆ ಕಸಕಡ್ಡಿಯನೊಗ್ಗೂಡಿಸಿ
ಧೂಳಿನ ಗೋಪುರವೆತ್ತಿ
ಸರ್ರನೆ ಗಿರ್ರನೆ ತಿರುಗುತ
ಕಾಳಿಂಗನವೊಲು ಹೆಡೆಯೆತ್ತಿ
ಮುಗಿಲನೆ ಮುತ್ತಿ
ಆಡುವ ಬಿರುಗಾಳಿಯ ನೋಡು!
ತಕಥೈ ದಿತ್ಥೈ
ತಕಥೋಂ ದಿಕಥೋಂ
ಬಯಲಾಟದ ರಾವಣನಂತೆ
ಕುಣಿಕುಣಿಯುತ ತಿರುಗುವ ಈ
ಚೋದ್ಯವ ನೋಡು!

ಮೈಯಿಲ್ಲದ, ರೂಹಿಲ್ಲದ ಗಾಳಿ,
ಭಾವವು ಮೈತಳೆದಂದದಿ
ಆಕಾರವ ತಾಳಿತು ಇಲ್ಲಿ
ಯಾವುದೊ ಛಂದೋಬಂಧದಲಿ!

ಎಲ್ಲೋ ಹೇಗೋ ಬಿದ್ದಿದ್ದುವು ಈ
ತರಗೆಲೆ ಕಸಕಡ್ಡಿಯ ಚೂರು!
ಗಾಂಧೀಜಿಯ ವ್ಯಕ್ತಿತೆಯಲಿ ಮೇಲೆದ್ದಾ ಜನತೆಯೊಲು,
ಮೇಲೆದ್ದುವು ಮರುಳಿನ ತೆರ ಕುಣಿದವು
ಬಿದ್ದುವು ಮತ್ತೆಲ್ಲೋ!
ಬಟ್ಟನೆ ಬಯಲೊಳಗೊಂದರೆಚಣ
ಹೇಗೋ ಬಂದಿತು ಹೇಗೋ ಹೋಯಿತು
ಬಿರುಗಾಳಿಯ ನೋಟ
ಯಾರೋ ಮಾಡಿದವೊಲು ಮಾಟ!

# ಮಳೆಯ ಮೋಡಕ್ಕೆ

ಬಿರುಬಿಸಿಲ ಬೇಗೆಯಲಿ ಸೊರಗಿ ಸೊಪ್ಪಾಗಿರುವ
ತಿರೆಯ ಹಸುರಿನ ಕರೆಯು ಕೇಳದೇನು ?
ಯಾವ ಕಿವುಡೋ ನಿನಗೆ, ಮುಗಿಲನ್ನೆ ತುಂಬಿರುವೆ
ಬರಿಯ ನಟನೆಯು ನಿನಗೆ ಸಾಜವೇನು ?

ಹಗಲೆಲ್ಲ ಧಗೆಯಲ್ಲಿ ಬೆಂದ ಮನ, ಸಂಜೆಯಲಿ
ಒಂದುಗೂಡುತ ನಭವ ತುಂಬಿ ನಿಂದು
ಮಿಂಚುಗಣ್ಣನು ಅತ್ತ ಇತ್ತ ಹೊರಳಿಸುತ ಅನು-
ರಾಗವತಿಯಾಗಿರುವ ನಿನ್ನ ಕಂಡು
ಇಂದು ಬಂದೇ ಬರುವುದಲ್ಲ ಮಳೆ
ಸುರಿಯುವುದು ಧಾರೆಯಾಗಿ,
ಎಂದು ಬಯಕೆಯ ಬಟ್ಟಲಂತಿರುವ ಕಣ್ ತೆರೆದು
ನಿಲ್ಲುವುದು ದೀನವಾಗಿ!

ಮಿಂಚೇನು ಮೊಳಗೇನು, ನಿನ್ನ ವೈಭವದಿಂದ
ಭರವಸೆಯ ಬಿತ್ತುವೀ ಚೆಲುವಿದೇನು!
ಕಡೆಗೆ ಬಂದಂತೆಯೇ ಎಲ್ಲಿಗೋ ಮುನ್ನಡೆದು
ನಿಡುಸುಯ್ಲುಗಳ ನೇಣ ಬಿಗಿವುದೇನು!

ಮಾನವರ ಲೋಕದೀ ಕೃಪಣ ಕೃತಕತೆಯೆಲ್ಲ
ನಿನಗು ತಟ್ಟಿದುವೇನು ಈ ಕಾಲಕೆ ?
ಅದಕೇನು ಈ ಬಗೆಯ ಬೂಟಾಟಿಕೆ!

ಕೂಗಿದರೆ ಬೇಡಿದರೆ ಸ್ತುತಿಸಿದರೆ ಓಗೊಡುವ
ಕಾಲವೆಂದೋ ಹೋಯ್ತು ; ಆದರಿಂದು
ಬಯ್ದು ಮೂತಿಗೆ ತಿವಿದು ಹೇಳಿದರೆ, ಒಂಡಿಸಿತು
ತಿಳಿದೀತು ಇಲ್ಲಾರೊ ಇರುವರೆಂದು!

## ಮಳೆ

ಓಹೋ ಬಂದರು
ಕಡೆಗೂ ಬಂದರು
ಇಷ್ಟುದಿನ ಬರುವಾಸೆಯ ಬಿತ್ತಿ
ನಿರಾಸೆ ಗೊಳಿಸಿದ್ದವರು.
ಮತ್ತೆಲ್ಲೋ ಮುನ್ನಡೆಯುವರಿವರು
ಎನ್ನುತ ನಾವ್ ಸುಯ್ದಿರಲು
ಕಡೆಗೂ ಬಂದರು
ಆಕಾಶದ ಅತಿಥಿಗಳು!

ಅದೊ ಧುಮುಕುತ್ತಿಹರು
ಪಟ ಪಟ ಪಟ ಮನೆ ಹೆಂಚಿನಮೇಲೆ;
ಕೆಳಗಿಳಿದರು, ಒಳಗಿಳಿದರು
ಹರಿದಾಡುವರಿದೊ ಹಸುಮಕ್ಕಳವೋಲೆ!

ಅಲ್ಲೂ ಹೋದರು ಇಲ್ಲೂ ಹೋದರು
ಎಲ್ಲರನೂ ಮಾತಾಡಿಸುವಾಸೆ!
ಮರದಡಿ ಗಿಡದಡಿ ಹಸುರಿನಲಿ
ಕಡೆಗಾ ಚರಂಡಿ ಕೊಳಚೆಯಲಿ
ಹರಿದಾಡುವ ಮುಗಿಲಿನ ಮಕ್ಕಳಿಗೆ
ಈ ನೆಲವೆಂದರೆ ಎನಿತಾಸೆ!
ಸಂಭ್ರಮವೇನ್, ಸಡಗರವೇನ್
ಇವರಾಗಮನಕ್ಕೆ

ಗುಡುಗುಡುಗಿನ ಮೃದಂಗ ; ಮಿಂಚಿನ ಆರತಿ
ಎಲ್ಲವು ಈ ನೆಲದೊಳಿತಕ್ಕೆ.

ಓ ಬನ್ನಿರಿ ಅತಿಥಿಗಳೇ
ಸುಸ್ವಾಗತ ನಿಮಗೆ
ಒಲವಿಗೆ ಒಲವಲ್ಲದೆ
ಬೇರೇನಿದೆ ಕೊಡುಗೆ.

# ತರಗೆಲೆ

ಕುಳಿರ ಗಾಳಿಗೆ ಮರದ ತರಗೆಲೆಗಳುದುರಿಹವು;
ಹಾರಾಡುತಿವೆ ಬರಿದೆ ಪ್ರೇತದಂತೆ!
ಹೊಗೆಮಂಜು ಆವರಿಸಿ ಅವುಗಳನು ಮೂಸುತಿದೆ
ಕೊಳೆತ ಎಲುಬಿನ ಬದಿಯ ನಾಯಿಯಂತೆ!

ಉದುರಿದೀ ತರಗಿಂದ ಉಪಯೋಗವೇನಿನ್ನು?
ಹಾಕು ಬೆಂಕಿಯನವನು ರಾಶಿಗೈದು.
ಹತ್ತಿಸಿದೆಯಾ ಬೆಂಕಿ? ಹೊಗೆಮಂಜಿನೊಡಗೂಡಿ
ಹೊಗೆ ಏರುತಿದೆ ನೋಡು ಸುಯ್ದು ಸುಯ್ದು.

ಸಿಮಿಸಿಮಿಸಿ ಸುಡುತಲಿದೆ ಉರಿಯ ಕೆನ್ನಾಲಿಗೆಯು
ತರಗೆಲೆಯ ಬಾಳನ್ನು ಬೂದಿಮಾಡಿ.
ಸ್ಮೃತಿಯಾಯ್ತು ಬರಿ ಬೂದಿ; ಗಾಳಿ ಸುಳಿದಾಡಿಹುದು
ಚರಮಗೀತೆಯನಿದಕೆ ತಾನೆ ಹಾಡಿ!

ತಳಿರ ತುದಿಯಿಂದುದುರಿ ಮಂಜುಹನಿ ಬೀಳುತಿವೆ
ತರಗೆಲೆಯ ಸ್ಮೃತಿಗಾಗಿ ಕಂಬನಿಗಳಂತೆ!
ತಳಿರ ಮರೆಯೊಳಗೊಂದು ಮರಿಹಕ್ಕಿ ಚೀರುತಿದೆ
ನಮ್ಮ ನಿಷ್ಕರುಣೆಯನು ಶಪಿಸುವಂತೆ!

# ಸಂಜೆ

ಹಗಲ ಬೆಳಕಿನ ಗಡಿಗೆ–
ಯೊಡೆದು ಚೂರಾಯಿತದೊ
ಪಶ್ಚಿಮಾದ್ರಿಯ ಶಿಖರದರೆಯೊಂದರಲ್ಲಿ!
ಗಡಿಗೆಯಲ್ಲಿದ್ದ ರಸ ದಿಕ್ಕು ದಿಕ್ಕಿಗೆ ಹರಿದು
ಮೋಡಗಳಿಗೂ ಸಿಡಿದು
ಅಲ್ಲಲ್ಲಿ ಇಂಗುತಿದೆ ಮೌನದಲ್ಲಿ
ಬಾನ್ನೀರೆ ಬೆಪ್ಪಾಗಿ ನಿಂತಿರುವಳಲ್ಲಿ!

ಅಯ್ಯೊ ಏನಪಘಾತ!—
ಎಂದು ಕಂದಿ ಕುಂದಿದ ಮೋರೆಯಲ್ಲಿ ಜಗ—
ವತ್ತ ನೋಡಿತು ಆಗ ದುಗುಡದಲ್ಲಿ!
ಸಾಲುತೆಂಗಿನ ತೋಟವಲ್ಲಿರುವ ಗರಿಗರಿಯು
ಬಿಕ್ಕಿ ಮರ್ಮರಿಸಿದುವು ಗಾಳಿಯಲ್ಲಿ.
ಸುದ್ದಿ ತಿಳಿದೊಡನೆಯೇ ವಾಯುದೇವನು ನಡೆದ
ವಾರ್ತೆ ಹಬ್ಬಿತು ಜಗಕೆ ನಿಮಿಷದಲ್ಲಿ.

ಭಗ್ನ ಮಂದಿರ ಮೌನ ಇಳೆಯನಾವರಿಸಿತ್ತು
ಹಗಲಬೆಳಕಿನ ಚೂರು ನರಳಿ ಕರಗುತಲಿತ್ತು
ಮೌನಭೂತದ ತೆಕ್ಕೆಯಲಿ ಸಿಕ್ಕು ಜಗದ ಉಸಿರಡಗಿತ್ತು
ನೂರು ಜೀರುಂಡೆಗಳು ಹುಯ್ಯಲಿಟ್ಟುವು ಕಿವಿಯ ಕೊರೆಯುವಂತೆ!
ಮುಗಿಲ ಕಾಳ್ಗೊಗವಲ್ಲಿ ಚಿಕ್ಕೆಗಳು ಮಿನುಗಿದುವು
ಚಿಂತೆಗಳೆ ಕಣ್ತೆರೆದು ನೋಡುವಂತೆ.
ಅಲ್ಲಲ್ಲ; ಹಗಲ ಗೋರಿಯಮೇಲೆ ಹಚ್ಚಿಟ್ಟ ದೀಪದಂತೆ!

# ಜೀರುಂಡೆ

ಜಿರ್ರನೆಯೆ ಜೀರುಂಡೆ ಚೀರಿವೆ
ಕರಿಯ ಜಾಲಿಯ ಮರದಲಿ
ಇರುಳು ಇಳಿದಿದೆ; ಗಾಳಿ ಬೆವರಿದೆ
ನೆಲವೆ ನಡುಗಿದೆ ಭಯದಲಿ.

ನಾಳೆ ಮುಂಜಾವಿನಲಿ ಕಡೆಯುತ
ಬೆಣ್ಣೆ ತೆಗೆಯಲು ಬೆಳಕನು,
ಇರುಳ ಕಪ್ಪಿಗೆ ಹೆಪ್ಪನೆರೆವರೊ
ಜಿರ್ರನೆಯ ಜೀರ್ ದನಿಯನು!

ಎನಲು ಸುಮ್ಮನೆ ಮೊರೆವುದಾಲಿಸು
ಕಿವಿಯ ಕೊರೆಯುವ ಈ ರವ!
ಚಿಕ್ಕೆ ಬೆಕ್ಕಸಗೊಂಡು ನೋಡುತ
ಮೂಗುವಟ್ಟಿವೆ, ಚೋದ್ಯವ!

# ಸಿಡಿದ ಬಯಕೆ

ಬಯಸದಿದ್ದ ಬಯಕೆಯೊಂದು
ಬಂದು ಎದೆಯ ತಟ್ಟಿತು.
ಬಾಗಿಲು ತೆರೆ ಎಂದಿತು!
ಬಾಗಿಲು ತೆರೆದೊಳಗೆ ಕರೆದೆ.
ಒಳಗೆ ಬಂತು.
ಆದರ ತಂತು ನನ್ನ ಎದೆಯ ಬಿಗಿಯಿತು.
ಏನೊ ಆಸೆ, ಏನೊ ಚೆಲುವು
ಮನವ ಸೂರೆಗೊಂಡಿತು.
ಚಿತ್ತದಲ್ಲಿ ಬಿತ್ತವೊಂದು
ಬಿದ್ದು ಮೊಳೆತು ಎದ್ದಿತು.
ಎದೆಯು ನೀರ ಹೀರಿತು!

ತೆರೆದ ಬಾಗಿಲಾಚೆಯಿಂದ
ಏನೇನೋ ಕಂಡಿತು.
ಇಂದ್ರಲೋಕ
ಚಂದ್ರಲೋಕ
ಸುಂದರಿಯರ ಮಂದಹಾಸ
ಮಂದಾರದ ಆ ಸುವಾಸ
ಗಂಧರ್ವರ ವಾದ್ಯಘೋಷ
ಮನದ ತುಂಬ ತುಂಬಿತು
ಜೀವ 'ಆಹಾ' ಎಂದಿತು!
ನೋಡುತಿದ್ದೆ, ನೋಟವಿದ್ದ–
ಕಿದ್ದ ಹಾಗೆ ಮಾಯವಾಯಿತು.

ಕನಸೊಡೆಯಿತು ; ಒಡೆದ ಮೊಟ್ಟೆ-
ಯಿಂದ ಹೊಗೆಯು ಹೊಮ್ಮಿತು.
ಮೊಳೆತ ಸಸಿಯು ಕಿತ್ತು ಎಸೆದು
ಬಯಕೆ ಹಾರಿಹೋಯಿತು

ಹೇಗೊ ಬಂದು ಏನೊ ಒಂದು
ನೋವ ತಂದು ಬಿತ್ತುವ
ಬೆಳಕಿನಂತೆ ಎದೆಗೆ ಬಂದು
ಕಿಚ್ಚನಿಟ್ಟು ಹಾರುವ
ಆಟದ ಪರಿ ಎಂಥದೆಂದು
ಮನವು ತಿಳಿಯದಾಯಿತು
ಸುಮ್ಮನೆ ನಿಡುಸುಯ್ಯಿತು !

# ಮನದನ್ನೆ

ನಾಲ್ಕುಚಣ ನಸುಮುನಿಸು, ಮರುಚಣವೆ ಮಂಜು ಮೈ-
ತಿಳಿದು ಹೂಬಿಸಿಲು ಹೊಮ್ಮಿದೊಲು ನಗೆಯ ಬಗೆ! ; ಮೈ-
ಗೊಂಡ ಮಿಂಚಿನಂತಹ ನಡಿಗೆ. ಅಷ್ಟಮಿಯ ಶಶಿ
ತನ್ನ ತೆಳುವೆಳಗಿನಲಿ ತಿರೆಯ ಮೈಮರೆಯಿಸುವ
ಮೃದುಮಂದಹಾಸ ಸಮ್ಮೋಹಕತೆ; ಸೆರೆವಿಡಿವ
ಸೌಮ್ಯಶ್ರೀ. ಕಣ್ಣೀರಿನಲಿ ತನ್ನ ದೃಷ್ಟಿಯಸಿ-
ಯನು ಮಸೆದು ಝುಳಪಿಸುವ ಜಾಣ್ಮೆ ; ಎದೆಯ ಕರಗಿಸಿ
ಸೂರೆಗೊಳುವಂತೆಸೆವ ನಲ್ನುಡಿ ; ಮೋಹವಶಿ-
ಯಾದಂತೆ ಮನೆಗೆಲಸದಲಿ ಗುಣುಗಣಿಪ ರಾಗ-
ದಾಲಾಪ. ಕಾವ್ಯ ಕನ್ನೆಯ ಕಮನೀಯ ಕುಣಿತ
ನಿಸ್ವನದಂತೆ ಬಳೆಯ ಕಾಲುಂಗುರದ ಕ್ವಣಿತ !
ಇಂತಿರುವ ಮನದನ್ನೆ ಒಲೆಯ ಬಳಿ ಕುಳಿತಾಗ
ಪ್ರಾಚೀನ ಋಷಿಕನ್ಯೆ ! ಮಧುರ ಮಂಗಳಮೂರ್ತಿ
ಜೀವ ಯಾತ್ರೆಯ ಪಥಕೆ ಸಹಯಾತ್ರಿ ಮೋಣ್ ಸ್ಫೂರ್ತಿ.

# ಒಂದು ಸಂಜೆ

ಮಬ್ಬು ಮಬ್ಬಾಗಿರುವ ತೆಂಗುದೋಂಟದ ಹಸುರುಶಯ್ಯೆಯಲ್ಲಿ
ದಣಿದ ಹಗಲಿನ ತೇಜ ಮಲಗಿರುವುದು.
ಜಗವ ಪರಿವರ್ತಿಸುವ ಮೌನ ಕಾಂತಿಯ ಮೃದುಲ ತೆಕ್ಕೆಯಲ್ಲಿ
ವಿಶ್ವವೇ ಸೆರೆಯಾಗಿ ಬಿದ್ದಿರುವುದು.

ಸಂಜೆಗಣ್ಣಿಂದಿಳಿದ ಪರಮ ಕರುಣಾರಸದ ಮಡುವಿನಂತೆ
ಇಲ್ಲೊಂದು ಕಿರಿಯ ಕೆರೆ ಮಿರುಗುತಿಹುದು.
ಮಿಂಚುದೀಪದ ಕಣ್ಣ ತೆರೆದ ಊರಿನ ಮನೆಯ ಹರಹಿನಲ್ಲಿ
ಇರುಳ ಬಾಳಿನ ಬಯಕೆ ಚಿಗುರುತಿಹುದು.

ಹಗಲೆಲ್ಲ ರವಿ ಬಿತ್ತಿದಂಥ ಬೆಳಕಿನ ಬೀಜ ಮೊಳೆತಹಾಗೆ
ಮುಗಿಲಲ್ಲಿ ಚಿಕ್ಕೆಗಳು ಮಿನುಗುತಿಹವು
ಇಂಥ ರತ್ನಾಭರಣ ಲೋಕವನು ಆ ಹಗಲು ತನ್ನ ಒಳಗೆ
ಮುಚ್ಚಿದಚ್ಚರಿಗೀಗ ಮನವು ಬೆರಗು !

# ಅಶ್ರುಗಾನ

ಕಣ್ಣಂಚೊಳು ಮಿಂಚುವ
ಕಂಬನಿಯಲಿ ಕೇಳಿರುವೆನು
ನೋವಿನೆದೆಯ ಗಾನವ !
ಬಾನಿನಲ್ಲಿ ತಿರು ತಿರುಗುವ
ಕಂಬನಿಯೊಲು ಮಿರುಗುತಿರುವ
ತಾರೆ ಚಂದ್ರ ಗ್ರಹಗಳಲ್ಲು
ನಾನು ಕೇಳಿ ಬಲ್ಲೆನಯ್ಯ
ವಿಶ್ವದಶ್ರುಗಾನವ !

ಕಡಲು ಮೊರೆವುದೇಕೆ ಅಂತು
ಹಗಲಿರುಳೂ ಯುಗ ಯುಗ ?
ಯಾರನೋ ಕರೆಯುತಿಹುದು
ಎದೆಯ ನೋವ ತೆರೆಯುತಿಹುದು
ಆಲಿಸಿಹುದು ಈ ಜಗ !

ಇರುಳು ತನ್ನ ಸಾಸಿರ ಕಣ್
ತೆರೆದು ಬೆಳಕಿನುದಯಕಾಗಿ
ಹಂಬಲಿಸಿದ ಕಂಬನಿಯೊಲು
ಹಸುರೊಳು ಹಿಮ ಮಣಿಗಳು
ಥಳ ಥಳ ಥಳ ಹೊಳೆಯಲು—

ತಿರೆಯು ಕರೆಗೆ ಮರುಗಿ ಕರಗಿ
ಬಾನಿನ ಕಣ್ಣೀರು ಸುರಿಯ-
ಲದನು ಕುಡಿದು ನೆಲ ಹಸುರಿನ
ನುಡಿಯೊಳೆಡೆಯ ತೆರೆಯಲು-

ಚೆಲುವೆಂಬುದು ನೋವಿನಿಂದ
ಮೂಡಿಬಂದುದೆನಿಪುದು.
ಸ್ವಾರ್ಥದ ಕಣ್ಣೀರ್ಗಳಿಂದ
ಮಂಜಾಗಿಹ ನಮ್ಮ ಕಣ್ಗ-
ಳದನು ತಿಳಿಯಲಾರದು!

ಸ್ವಾರ್ಥವಲ್ಲದಿರುವ ಮಹೋ-
ದ್ದೇಶಕಾಗಿ ಅತ್ತ ಕಣ್ಣ
ಹನಿ ಹನಿಯೊಳು ಬೆಳಕಿದೆ,
ಆ ಬೆಳಕೊಳು ಚೆಲುವಿದೆ.
ಬಾಳಿಗೊಂದು ಬಲವಿದೆ.

# —ಗೆ

ಅಂದು ನೀನೊಬ್ಬಳೆಯೆ ಅತಿಮೌನದಲಿ ಬಂದೆ
ಹೊಳೆಗೊಂದು ಹೊಳೆ ಬಂದು ಸಂಗಮಿಸಿದಂತೆ
ಇಂದು ಮತ್ತೊಂದು ಹೊಸ ಜೀವವನು ತಂದೆ
ಇದು ನಮ್ಮದೆಂದೆ.

ಬಾಳನಂದನದಲ್ಲಿ ಮಂದಾರವರಳಿತೋ
ನಮ್ಮಿಬ್ಬರೆದೆಯಲ್ಲಿ ಕಂಪ ತುಂಬಿ
ದುಂಬಿಯಾದೆವು ನಾವು ಆ ಹೂವಿನೆದೆಗೆ
ಏನೆಂಥ ಬೆಸುಗೆ!

ಆ ಹೂವ ನಗೆಬೆಳಕು ಚಿಕ್ಕೆಯಾಯಿತು ನಮಗೆ
ಅನಂತಯಾತ್ರೆಯೀ ಹಾದಿಯಲ್ಲಿ.
ತೇಲುವೀ ದೋಣಿಗಳ ಬೆಸೆದುದೀ ಬಂಧ
ಕಂದನಾನಂದ!

# ಉದಯರಾಗ

ಓ ಎಚ್ಚರು ಓ ಎಚ್ಚರು
ಎದೆಯಾಳದ ಮರಿಯೇ,
ಹೊರಜಗದೀ ಕಲ್‌ಚಪ್ಪಡಿ-
ಯಡಿ ನಲುಗುವ ಸಸಿಯೇ.

ಬಲು ಮಿದು, ಭಂಗುರ ನೀ
ಮುಟ್ಟಿದರೇ ಮುರಿವೆ.
ಒಳಗಿನ ಕ್ರತು ಎಚ್ಚೆತ್ತರೆ
ಮೆಲ್ಲನೆ ನೀ ಮೇಲೆದ್ದರೆ
ಚಪ್ಪಡಿಯನೆ ಒಡೆವೆ!—

ಹುಳುಕೊರೆಯುವ, ಗೆದ್ದಲು
ಮೈಮುತ್ತುವ ಭಯವೆ?
ಅಳಿಯುವ ನಿರ್ಬಲಗದು
ಬೆಳೆಯುವ ಸಿನಗಲ್ಲು
ವಾಲ್ಮೀಕಿಯ ತೆರದಲಿ ನೀ
ಬಾ ಸಿಡಿಲಿನ ಮರಿಯೇ.

ನಿನ್ನೆದೆಯನು ಮೆಟ್ಟುವ, ಆ
ಕಲ್‌ಚಪ್ಪಡಿ ನಿನ್ನಡಿಗೆ
ಹುಡಿಯಾಗುತ ಕಡೆಗೆ
ಬೇರಿಗೆ ಬಲವೀವುದು ಮುಂದೆ
ಮನವನು ಮಾಡಿಂದೇ.

ಮಣ್ಣೊಳಗಿನ ಮಂದಾರವೆ
ಇನ್ನಾದರು ಮೇಲೇಳೋ.
ಆಕಾಶವೆ ಕೈ ಬೀಸಿದೆ
ಆ ವಾಣಿಯು ಕೇಳೋ
ನಿದ್ದೆಯು ತೊರೆದೇಳೋ

# ತಾಯಿ ತನ್ನ ಮಗುವಿಗೆ

ನೆನ್ನ ಎದೆಯ ಬಳಿ ಉಸಿರನಾಡುತಿಹ ನನ್ನ ಕಿರಿಯ ಕಂದ
ನನ್ನ ನಿನ್ನೆದೆಯ ಬೆಸೆಯಿತಾವುದೋ ಕಾಣದಿರುವ ಬಂಧ.
ನನ್ನ ಗರ್ಭದಲಿ ಮೂಡಿ ಬಂದೆ ನೀನಾವಲೋಕದಿಂದ?
ಇಂದು ನಮ್ಮವನು, ನಮ್ಮ ಲೋಕದವನೈದುದಿನಗಳಿಂದ.

ಬೇರೆ ಗತಿಯೆ ಇಲ್ಲೆಂಬ ತೆರದಿ ನನ್ನೆದೆಯಬಾಗಿಲಲ್ಲಿ
ಮಲಗಿ ಬೇಡುತಿಹೆ ಪ್ರೇಮಭಿಕ್ಷೆಯನು ಕಿರಿಯ ರೂಪದಲ್ಲಿ
ನನ್ನೆದೆಯ ಮುಗುಳು ತಾನಾಗಿ ಅರಳಿ ಹೂವಾಗಿ ಹೊಮ್ಮಿದಂತೆ
ನೀನರಳಿಬಂದೆ ನನ್ನೆದೆಯ ಬಳಿಗೆ ಕಿರಿದೊಂದು ಕೂಸಿನಂತೆ.

ಹೂಹೂಗಳೆದೆಯ ನವುರನ್ನೆ ತೆಗೆದು ಮಾಡಿಟ್ಟ ಗೊಂಬೆಯಂತೆ
ಹೊಸತಳಿರ ಜೊಂಪ ತಂಗದಿರ ತಂಪ ಕುಡಿದು ಮಲಗಿದಂತೆ
ಮಲಗಿರುವೆ ನೀನು ಎದೆಹಾಲನುಂಡು ನನ್ನ ಪಕ್ಕದಲ್ಲಿ
ನಿಸ್ತರಂಗಕಾಸಾರದಂತೆ ಬೆಳುದಿಂಗಳಿರುಳಿನಲ್ಲಿ!

ಯಾವ ಚಿತ್ರಗಳು ಮೂಡುತಿರುವುವೋ ಕಿರಿಯ ಎದೆಯ ಒಳಗೆ
ಕಳೆದ ಜನ್ಮಗಳೊ, ಬರುವ ಜನ್ಮಗಳೊ, ನೂರು ಜೀವಯಾತ್ರೆ
ತೋರುತಿರುವುದೋ; ಅರಿಯೆನೊಂದನೂ; ನಿನ್ನ ಉಸಿರಿನೊಳಗೆ
ಕೇಳುತಿರುವೆನಾ—"ಜೀವರೆಲ್ಲರೂ ಪ್ರೇಮದೊಂದು ಪಾತ್ರೆ!"

ನೀನಾರೊ ಏನೊ, ಏಕೆ ಬಂದೆಯೋ ನನ್ನ ಒಡಲಿನೊಳಗೆ
ಬಂದಮೇಲೆ ನೀನಾದೆ ನನ್ನ ಅಕ್ಕರೆಯ ಬಂಧದೊಳಗೆ.
ಯಾರೊ ಏನೊ ಬಂದಿಂತು ನಮ್ಮ ಒಲವ ಸೆಳೆದು ಬೆಳೆದು
'ನೀನು ನನ್ನವನು'—ಎನಿಸಿಕೊಳ್ಳುವಚ್ಚರಿಯದೊಂದು ಹಿರಿದು!

ನನ್ನ ಗರ್ಭದಲಿ ಮೂಡಿಬರುವ ಮೊದಲೆಲ್ಲಿ ಇದ್ದೆ ಮಗುವೆ?
ಯಾವ ರೂಪದಲಿ, ಯಾವ ದೇಶದಲಿ, ಯಾವ ಹೆಸರಿನಲ್ಲಿ?
ಎಷ್ಟು ಜನ್ಮದಲಿ, ಎಷ್ಟು ಯುಗಗಳಲಿ, ತಾರೆ ಗ್ರಹಗಳಲ್ಲಿ
ಸುತ್ತಿ ಬಂದೆಯೋ; ಏನುತಿಳಿಯದೊಲು ಬರಿದೆ ನಟಿಸುತಿರುವೆ!

ಎಲ್ಲ ಬಲ್ಲರೂ ಶಕ್ತಿಯಿದ್ದರೂ ನಿಶ್ಶಕ್ತಮುಗ್ಧನಂತೆ,
ನಟಿಸಿ ನನ್ನೆದೆಯ ಹಾಲನುಣ್ಣುವಾ ಬಯಕೆಯೇನೊ ನಿನಗೆ?
ನಾನೆಲ್ಲ ಬಲ್ಲೆ; ಈಗಲಾದರೂ ಬಂದೆಯಲ್ಲ ಬಳಿಗೆ.
ಭಕ್ತನೆಡೆಗೆ ತಾನಾಗಿ ಬರುವ ಮಾದೇವಕರುಣೆಯಂತೆ!

# ಬೆಳಕು—ಧೂಳು

ಕಿಟಕಿಬಾಗಿಲ ಮುಚ್ಚಿ ಒಳಗೆ ನಿದ್ರಿಸುತಿದ್ದೆ.
ಬೆಳಗಾಯಿತೇನೋ ಎಂದು ಮೇಲೆದ್ದೆ
ಹೌದು; ಬೆಳಗಾಗಿತ್ತು
ಮೂಡುದೆಸೆ ರಂಗಾಗಿ ಕಂಗೊಳಿಸುತಿತ್ತು.
ಇರುಳ ತಪ ಸಫಲವಾಗಿತ್ತು.
ಮನಕೆ ಸಂಭ್ರಮವಾಯ್ತು; ಕಿಟಕಿ–
ಯೊಂದನು ತೆರೆದೆ!

ಸ್ವರ್ಗ ಸುಂದರ ಕಿರಣವೊಂದೈತಂದು
ಕೋಣೆಯನು ಬೆಳಗಿತಂದು.
ಬಂದ ಬೆಳಕನು ಕಂಡು ಬೆರಗಾದೆ
ಅದರಲ್ಲಿ ಮೈ ತೊಳೆದೆ; ಮಣಿದೆ.
ಉಳಿದ ಕಿಟಕಿಗಳಲ್ಲು
ಬೆಳಕು ಬರುವುದು ಎಂದು
ಎಲ್ಲವನು ತೆರೆದೆ, ಅತಿಯಾಸೆಯಿಂದ!

ನೋಡುತಿರೆಯಿರೆ ನಾನು
ಬೇರೆ ದಿಕ್ಕುಗಳಿಂದ
ತೆರೆದ ಕಿಟಕಿಗಳಿಂದ
ರೊಯ್ಯನೆಯೆ ಬೀಸುತ್ತ ಬಂತೊಂದು ಬಿರುಗಾಳ
ಧೂಳು ಕಸ ಕಡ್ಡಿಗಳ ಹೊತ್ತು ಧಾಳಾ ಧಾಳಿ–
ಯಲಿ ಭೋರ್ಗರೆದು,
ಕೋಣೆಯಲಿ ಕಸದ ಮಳೆಗರೆದು!

ಬೆಳಕು ಐತರಲೆಂದು ತೆರೆದ ಕಿಟಕಿಗಳಿಂದ
ಧೂಳನೂ ತೂರುವುದು ಯಾರ ಆನಂದ!
ಬೆಳಕನಿತ್ತವನೇ ಮತ್ತೆ ಧೂಳನೂ ತೂರುವುದೆ?
ಗುಡಿಸಿಕೊಳ್ಳಲಿ ಎಂದೆ? ಇರಬೇಕು, ಅರ್ಥವಿದೆ!

S. S. HIREMATH
Retd. Principal
"SAMATA" Sector No. 11
Plot No. 45, Malmaruti Extension,
Mahantesh Nagar, Belgaum-590015
Mob: 9449311514, 9008326282

# ಮುಗ್ಧ ತೀರ್ಥ

ಈ ಮನೆಯ ನೆಲದಲ್ಲಿ ಪುಟಿದು ಚಿಮ್ಮುತಲಿರುವ
ದೇವಲೋಕದ ದಿವ್ಯ ತೊರೆಯ ಮರಿಯೇ
ನಿನ್ನ ಸಾನ್ನಿಧ್ಯದೀ ಮುಗ್ಧತೀರ್ಥದಿ ನಾನು
ದಿನದ ಧೂಳಿನ ಬಾಳ ತೊಳೆಯುತಿರುವೆ!

ಮನದ ಅಂಗಳದಲ್ಲಿ ಬೆಳೆದ ಬಯಕೆಯ ಬಳ್ಳಿ-
ಯರಳಿಸಿದ ಮಲ್ಲಿಗೆಯ ಹೂವು ನೀನು.
ನಿನ್ನ ಮೃದುಹಾಸ ಮುಗ್ಧ ಕೋಮಲತೆ ಸೋಂಕಿದರೆ
ಕಗ್ಗಲ್ಲಿನೆದೆಯಲ್ಲು ಹೂವರಳದೇನು ?

ಬೇಸರದ ನೀರಸದ ಮರಳು ಕಾಡೊಳು ನೀನು
ನಗುವ ನಂದನದಂತೆ ಮೂಡಿಬಂದೆ
ನೀನೀವ ಸಂತಸಕೆ ನಾವೇನು ಕೊಟ್ಟೇವೊ,
ಸಾಲಗಾರರೊ ನಾವು ನಿನ್ನ ಮುಂದೆ !

ಜನುಮಗಳ ಹಾದಿಯಲಿ ಉರುಳುವೀ ಸಂಸಾರ
ರಥಕೆ ಸಾರಥಿಯಾಗಿ ನಡೆಸುತಿರುವೆ
ಪ್ರೇಮಯಜ್ಞದಿ ಮೂಡಿ ಬಂದಿರುವ ಹೊಂಬೆಳಕೆ
ಬಾಳ್ಗೊಂದು ಬೆಳಕಾಗಿ ಹೊಳೆಯುತಿರುವೆ!

# ಆಷಾಢ

ಸಾಗಿಯೇ ಸಾಗುತಿವೆ, ಸಾಗಿಯೇ ಸಾಗುತಿವೆ
ಲಗ್ಗೆನುಗ್ಗುವ ಸೇನೆಯೊಲು ಮೋಡಗಳ ಸಾಲು!
ಸುತ್ತ ನರಳಿನ ನೆರಳು,
ಜೀವಗಳೊ ಛಾಯೆಗಳೊ
ತಿಳಿಯಲಾರದ ಒಗಟು!

ರವಿಯಿಲ್ಲ. ಶಶಿಯಿಲ್ಲ
ಬೆಳಕೂ ಅಲ್ಲ ಕತ್ತಲೂ ಅಲ್ಲ
ಮೋಡಗಳ ಕೆಸರಿನಲಿ ಹೂತುಹೋಗಿದೆ.
ಉದಯಾಸ್ತಗಳ ಪೆಂಪು!
ನೂರು ಕೊರಗಿನ ಜಿನುಗಿನೊಲು
ತಟಪಟನೆ ತಟಪಟನೆ
ಒಂದೇಸಮನೆ ಕೊರೆವ ಸೋನೆಯ ಮೇಳ-
ದಲಿ ಜಗ ಮೂಕ,
ಬೇಸರದ ಗೋರಿಯಾಗಿದೆ ಲೋಕ!

ಗಾಳಿಗಳ ಗೋಳಿನಲಿ ಮೋಡಗಳ ತುಮುಲದಲಿ
ಸೋನೆಗಳ ಮೇಳದಲಿ
ಸಿಕ್ಕು ನರಳುವ ಜಗಕೆ ಎಂದು ಬಿಡುಗಡೆಯಹುದೊ
ಶ್ರಾವಣದ ಶ್ರೀ ಗೌರಿಯವತಾರವೆಂದಹುದೊ
ಎಂದು ಕಾದಿದೆ ಜೀವ ಗೂಡಿನೊಳಗೆ
ಗರಿ ಮುದುರಿ ಕಣ್ಮುಚ್ಚಿ ಮೌನದೊಳಗೆ!

# ಭಗ್ನಜೀವ

ಕಂಡೆ ನಾನು, ಬೆಂತರನೊಲು ನಿಂತ ತಂತಿ ಕಂಬದಿ
ಸಿಕ್ಕಿ ರೆಕ್ಕೆ ಬಡಿವ ಗಾಳಿಪಟವೊಂದನು ಮರುಕದಿ
ಆಷಾಢದ ಮೋಡದವೊಳೆ ಮೇಲೆ ಹರಿಯುತಿದ್ದಿತು
ಕೆಳಗೆ ಬಯಲಿನಲ್ಲಿ ಮಕ್ಕಳಾಟ ನಡೆಯುತಿದ್ದಿತು.

ಸಾಲು ಸಾಲು ತಂತಿಯೆನಿತೊ ಕಂಬದಿಂದ ಕಂಬಕೆ
ತುಡಿವ ಗಾಳಿಪಟದ ಸುಯ್ಲು ಗಮನಿಸದೊಲು ಮುಂದಕೆ
ಹರಿಯುತಿರಲು, ಹುಚ್ಚುಗಾಳಿ ಮೊರೆದು ಪಟವ ಹೆದರಿಸಿ
ಕುಣಿಯುತಿತ್ತು ಮರ ಮರಗಳ ಮಯ್ಯನೆಲ್ಲ ನಡುಗಿಸಿ

ಆಷಾಢದ ಗಾಳಿಗೆ ಪಟ ಸಿಕ್ಕು ಶೀರ್ಣವಾಗಿದೆ
ಬರಿಯಕಡ್ಡಿ ಎಲುಬಿನೊಡಲು ಸಾವಿನೊಡನೆ ಸೆಣಸಿದೆ.
ಏರಲಾರದಿಳಿಯಲಾರದಂಥ ಮುಷ್ಟಿ ಬಿಗಿತಕೆ
ಸಿಕ್ಕಿ ನರಳಿ ಕೊರಗಿರುವುದು ಜಿನುಗಿದಂಥ ಸೋನೆಗೆ!

ಒಮ್ಮೆ ಇದೂ ಆಕಾಶದ ಬಯಲಲಾಡುತಿದ್ದಿತು
ಸುತ್ತ ಬಂದ ಹಕ್ಕಿಗಳನು ಹೆದರಿಸೋಡಿಸಿದ್ದಿತು.
ಕೆಳೆಯ ಪಟಗಳೆಲ್ಲ ಇಳಿದು ಮನೆಯ ಸೇರಿಕೊಂಡುವು
ಆದರಯ್ಯೊ ದಾರ ಹರಿದು ಇಲ್ಲಿಬಂದು ಬಿದ್ದಿತು.

ಈಗ ಹಲವು ಹಕ್ಕಿಗಳೂ ಇದರ ಪಾಡನೋಡುತ
ಅಣಕಿಸುತ್ತ ಹಾರುತಿಹವು ತಮ್ಮ ಗರಿಯ ಕೆದರುತ
ಮೇಲೆ ನಡೆವ ಕಪ್ಪುಮೋಡ ಮುಖಕೆ ನೀರನೆರಚಿದೆ
ನೊಂದವರನು ನೋಯಿಸುವುದೆ ಜಗದ ಲೀಲೆ ಎನಿಸಿದೆ!

ಕೆಳಗೆ ಪಟದ ಸೂತ್ರಧಾರನೊಬ್ಬನಿರುವನೆಂಬುದ
ಮರೆತು ತಾನೆ ಬಾನೊಳಲೆವ ಶೂರನೆಂದು ಬೀಗಿದ
ಹವ್ಮಾಗಿಂಥ ಪತನವಾಯ್ತೊ ; ಅಥವ ದುರದೃಷ್ಟವೋ,
ನೆನೆಯಬೇಡ ಹಿಂದನೆಲ್ಲ, ಅದನು ನಾವು ಬಲ್ಲೆವೊ ?

ಹೇಗೊ ಏನೊ ಇತ್ತ ಬಂದು ಪತಿತಯೋಗಿಯಂದದಿ
ಸಿಕ್ಕುದಾಯ್ತು ಕಂಬದಲ್ಲಿ ಮತ್ತೆ ಅಲುಗದಂದದಿ
ಯಾವ ಕೈಯಿ ಬಂದುಇದರ ಬಂಧನವನು ಹರಿವುದೊ
ಬಿಡಿಸಿದರೂ ಹರಿದ ಪಟವದೆಂತು ಮೇಲಕೇರ್ವುದೊ !

ಕಂಬದಿಂದ ಕಂಬದೆಡೆಗೆ ತಂತಿಯೆನಿತೊ ಓಡಿವೆ.
ಬಾನ ಬಯಲಿನಲ್ಲಿ ಹಲವು ಗಾಳಿಪಟಗಳಾಡಿವೆ
ಕೆಳಗೆ ಬಯಲಿನಲ್ಲಿ ಮಕ್ಕಳಾಟ ನಿಲದೆ ಸಾಗಿದೆ
ತಂತಿ ಕಂಬದಲ್ಲೀ ಪಟ ದೀನವಾಗಿ ನೋಡಿದೆ !

# ಮಗುವನ್ನು ನೋಡಿ

ಹರಿದಾಡುವನು ಇವನು ಮನೆತುಂಬ, ನೆಲವೆ
ಮಿದುವಾಯಿತು !
ಎಲ್ಲಿದ್ದನೋ ಇವನು ; ಇವನಿಂದ ನಮ್ಮ
ಮನೆ ತುಂಬಿತು
ಹೂಗಂಪು ತುಂಬಿರುವ ಸರಸಿಯಂತೆ ಮನ
ಚೆಲುವಾಯಿತು.

ಇವನ ನಗುವೇನು, ಊದುಬತ್ತಿಯ ನವುರು
ಗೆರೆಯ ಧೂಪ !
ಉರಿಗಿಟ್ಟ ಹಸಿ ಸೌದೆ ಹೊಗೆಯನುಗಿದಂತೆ
ಇವನ ಕೋಪ !
ಹಿಡಿವರಾರೂ ಇಲ್ಲ, ಆಡಿದುದೆ ಆಟ
ಇವನೆ ಭೂಪ !

ಕಾಗೆ ಗುಬ್ಬಿಗಳೊಡನೆ ಇವನು ಸಲ್ಲಾಪ
ನಡೆಸುವವನು
ಬೀದಿಯಲಿ ನಡೆವವನೆಲ್ಲ ಕೈಬೀಸಿ
ಕರೆಯುತಿಹನು.
ವಿಶ್ವಚೇತನವನೆಲ್ಲೆಲ್ಲು ಕಂಡು
ಬಾಳುತಿಹನು !

ಇದ್ದೀತು ಏಸುದಿನ, ಮಧುರ ನವನೀತ
ಮುಗ್ಧಮನಸು !
ಬಾಳ ಬಿಸಿಗೆ ಕರಗಿ ನೀರಾದೀತು, ಈ
ಮಧುರ ಕನಸು.
ಇರುವುದರಲೇ ಅದನು ತುಂಬಿಕೊಳ್ಳುತಿದೆ
ನನ್ನ ಮನಸು !

# ಬಾಗಿಲಲ್ಲಿ

ಮೂಡಿಬಹ ನೇಸರಿನ ಜೊತೆಗೊಂದು ಹೊಸ ಚಿಂತೆ
ದಿನ ದಿನವು ಮೂಡಿಬಂದು,
ಸೂರ್ಯನಸ್ತಮಿಸಿದರು ಮುಳುಗದೆಯೆ, ನ-
ನ್ನೆದೆಯಲ್ಲಿ ಬೇರೂರಿ ನಿಂದು
ಇರುಳ ಚಿಕ್ಕೆಗಳಲ್ಲಿ ಚಾಚಿ ಸಾಸಿರ ಕುಡಿಯ
ಹಗಲಿರುಳು ಹಬ್ಬುತಿರಲು
ಬಾಳ ಬೀದಿಯ ನಡುವೆ ಬಿದ್ದೊಂದು ಕಲ್ಲಿನೊಲು
ದಿನದ ಭಾರದ ರೋಣುಗಲ್ಲಿನಡಿಗೆ
ಸಿಕ್ಕು ಈ ಜೀವವೇ ತಳಮುಳಿಸಿ ನಡುಗೆ,
ನೂರು ನೋವಿನ ಕೀಟ ತಲೆಯ ಗೂಡಿನ ಸುತ್ತ
ಮೊರೆ ಮೊರೆದು ಕೊರೆ ಕೊರೆದು ಹಾರುತಿರಲು,
ಸಂಶಯದ ಜೇಡ ಜಾಲದಿ ಮನಸು
ಹುಳದಂತೆ ಮಿಡುಕುತಿರಲು,
ಬಾಳ ಕಣಜದ ಕಾಳು ಇಲಿಗಳಿಗೆ ಪಾಲಾಗಿ
ಬರಿಜೊಳ್ಳು ಒಳಗೊಳಗೆ ಕೊಳೆಯುತಿರಲು
ಅತೃಪ್ತಿ ದಾರಿದ್ರ್ಯ ಸಂಕಟದ ಸಾಗರದಿ
ಒಡೆದ ಬದುಕಿನ ಹಡಗು ಜೀಕುತಿರಲು
ಯಾವ ಬಿರುಗಾಳಿಯೋ ದೂರದಿಂದಬ್ಬರಿಸಿ
ಬೀಸಿ ಬರಲು—
ಯಾವುದೀ ಶುಭದಭಯ ವಾಣಿ ಇಂದು
ನುಡಿಯುತಿದೆ ನನ್ನ ಮನೆವಾಗಿಲಲಿ ನಿಂದು !
"ತಲ್ಲಣಿಸದಿರು ಕಂಡ್ಯ ತಾಳುಮನವೇ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ"

ಏನುನುಡಿ, ಎಂಥನುಡಿ !
ಅಲ್ಪತೆಗೆ ಸಿಡಿಲಬಡಿ !
ಯಾರು ನುಡಿಯುವರಿಂತು ? ಹರಿದಾಸರು !
ಗಂಭೀರ ಮುಖಮುದ್ರೆ ; ಗಾನದಾನಂದದಲಿ
ಯಾವ ಹಿರಿದನೊ ಕಂಡು ಅದನು ಕುಡಿಯುವ ತೆರದಿ
ಅರೆಮುಗಿದ ಕಣ್ಣಿನೆವೆ ; ಹೆಗಲಲಿದೆ ತಂಬೂರಿ
ತುಳುಕುತಿದೆ ಹಾಡು
"ತಲ್ಲಣಿಸದಿರು ಕಂಡ್ಯ ತಾಳುಮನವೇ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ"
ಭಿಕ್ಷಕ್ಕೆ ಬಂದವರ ಮುಂದೆ ಭಿಕ್ಷುಕನಾದೆ
ನನ್ನೆದೆಯ ಜೋಳಿಗೆಯ ನಾನೆ ತೆರೆದು,
ಮುಂದೆ ನಡೆದರು ಅವರು ಹಾಡ ಸುರಿದು !

# ತಾಯಿಗೆ

ಒಂದು ಸುಂದರ ಹೂವನರಳಿಸಿದ ಲತೆಯಂತೆ
ನೀನಿರುವೆ ನಸುನಗುವ ಕಂದನೊಡನೆ.
ಒಂದೆ ಬೆಳ್ಮುಗಿಲನ್ನು ಮಡಿಲಲ್ಲಿ ಹಿಡಿದಿರುವ
ಗಿರಿಕನ್ಯೆಯಂದದಲಿ ತೋರುತಿರುವೆ !

'ನನ್ನ ಚಿನ್ನ ಬಂಗಾರಿ ಅಪರಂಜಿ ಕಟ್ಬಾಣಿ'
ಎಂದು ಮಗುವನು ಕರೆದುದೆನಿತು ಸಲವೊ !
ಎದೆಯ ಸಿರಿಯನ್ನೆಲ್ಲ ಸವಿ ಮುತ್ತಿನಲಿ ತುಂಬಿ
ಎರೆದನಿತು ತಣಿವಿಲ್ಲ ; ಏನು ಒಲವೊ !

ತನ್ನಿಷ್ಟ ದೇವತೆಗೆ ಪೂಜೆಗೈಯುತ ದಿನವು
ತನ್ನ ತಾನೇ ಮರೆವ ಭಕ್ತನಂತೆ.
ಆದರ ಸಿಂಗಾರದಲಿ ನಿನ್ನ ನೀನೇ ಮರೆತೆ
ಬೊಂಬೆಯಾಟದೊಳಿರುವ ಹಸುಳೆಯಂತೆ !

ನಿನ್ನ ಕಣ್ಣೊಳು ಹೊಳೆವ ವಾತ್ಸಲ್ಯ ಚಂದ್ರಿಕೆಯೊ-
ಳದ್ದಿ ಶಿಶು ನಗುತಲಿದೆ ಚಿಕ್ಕೆಯಂತೆ !
ಜಗವನಾಳುವ ಒಲವು ಮೈದೋರಿದೀ ಪರಿಗೆ
ಬೆರಗುವಮೌನದೊಳಿರುವೆ ಬಾನಿನಂತೆ !

# ಕ್ರಾಂತಿಕಾರ

ಅದೊಬಂದ, ಇವನೊಂದು ಕಿರಿಯಬಿರುಗಾಳಿ !
ಮನೆಯ ಒಳಗೂ ಹೊರಗು ಇವನದೇ ಧಾಳಿ,
ಇದ್ದುದೊಂದೆಡೆ ಇರದು ಇವನ ರಾಜ್ಯದಲಿ
ತುಂಟತನಕಿನ್ನೆರಡು ಕಾಲ್ ಬಂದ ತೆರದಿ
ಬಂದುವಿವನಿಗೆ ಎರಡು ಪುಟ್ಟಕಾಲು
ಮನೆಯ ವಸ್ತುಗಳೆಲ್ಲ ದಿಕ್ಕುಪಾಲು !

ತುಂಬುಕಿತ್ತಲೆ ಕೆನ್ನೆ, ನಗೆ ಮಿಂಚುಗಳ ಕುವರ
ಕ್ರಾಂತಿಕಾರ !
ಹೊಳೆವೆಳೆಯ ಕಂಗಳಲಿ ಬೆಳುದಿಂಗಳನು ತುಂಬಿ
ತಂದು ಮನೆಯಂಗಳಕೆ ಸುರಿವ ಧೀರ.
ಇವನು ಎದ್ದರೆ ಮನೆಯ ಮೈಯೆಲ್ಲ ಎಚ್ಚರ
ಇವನು ಮಲಗಲು ಮನೆಗೆ ಕವಿಯುವುದು ಮಂಪರ !

"ಕೊಳಲಿನಿದು, ವೀಣೆಯು ಇನಿದು ಎನ್ನುವರು
ಮಕ್ಕಳ ಸೊಲ್ಲನಾಲಿಸದ ಜನರು"
ಎಂದೊರೆದ ತಮಿಳು ಕವಿ ; ಅವನ ಮಾತಿನ ಸತ್ಯ
ಅನುಭವಕೆ ಬರುತಿಹುದು ಇವನ ಎದುರು !
ಇವನ ಮಾತಿನ ಅರ್ಥ ದೇವರೇ ಬಲ್ಲ
ಭಾವ ಗೀತಗಳಂತೆ ಅಸ್ಪಷ್ಟವೆಲ್ಲ !

ಚಂದ್ರಮಾಮನ ಅಳಿಯ, ಬೆಕ್ಕು ನಾಯಿಯ ಗೆಳೆಯ,
ನಮ್ಮ ಲೋಕದ ತಿಳಿವಿನಾಚೆಯವನು
ಅವನ ನೀತಿಯೆ ಬೇರೆ, ಅವನ ನಿಯತಿಯೆ ಬೇರೆ
ದೇವ ಲೋಕದ ಬೆಳಕ ಹಿಡಿಯುವವನು

ಮಹ ಮಹಾ ಪಂಡಿತರ ಉದ್ಗ್ರಂಥಗಳನೆಲ್ಲ
ನೆಕ್ಕಿ ರುಚಿ ನೋಡುವನು ರಸನೆಯಿಂದ !
ಎಷ್ಟಾದರೂ ಎಲ್ಲ ಬರಿಯ ನೀರಸವೆಂದು
ಹರಿದೆಸೆದು ಬಿಸುಡುವನು ತಾತ್ಸಾರದಿಂದ !

ಮನೆಗೆ ಮನೆಯೇ ಇವನ ಜೊತೆಗೂಡಿ ಆಡುವುದು
ಒಲವಿನಿಂದ
ನಮಗಡ್ಡಲಾಗಿರುವ ವರುಷಗಳ ಕರಿ ತೆರೆಯ
ಸರಿಸಿ ಬಾಲ್ಯದ ಚೆಲುವ ತಂದು ಕೊಡುವನು ಇವನು
ತನ್ನ ಒಂದೇ ಒಂದು ಮೃದು ಹಾಸದಿಂದ.

ಸಿಟ್ಟುಬಂದರೆ ಇವನ ತಡೆಯುವವರಾರುಂಟು ?
ರುದ್ರಾವತಾರ !
ನಕ್ಕು ನಗಿಸುವ ಚಿಣ್ಣ, ಎದೆಯ ಒಲವಿನ ಹಿರಿಯ
ಸೂರೆಕಾರ.
ನನಗು ಅವಳಿಗು ನಡುವೆ ವ್ಯಕ್ತಪ್ರೇಮದ ಸೇತು ;
ಇವ ಮಾಯಕಾರ
ಎರಡು ಬಾಳನು ಬೆಸೆದ ಸೂತ್ರಧಾರ !

# ತೊರೆಯ ಹಂಬಲ

ಕಾಣದ ಕಡಲಿಗೆ ಹಂಬಲಿಸಿದೆ ಮನ,
ಕಾಣಬಲ್ಲೆನೇ ಒಂದುದಿನ ?
ಕಡಲನು ಕೂಡಬಲ್ಲೆನೇ ಒಂದುದಿನ–

ಕಾಣದ ಕಡಲಿನ ಮೊರೆತದ ಜೋಗುಳ
ಒಳಗಿವಿಗೇಗಳು ಕೇಳುತಿದೆ
ನನ್ನ ಕಲ್ಪನೆಯು ತನ್ನ ಕಡಲನೇ
ಚಿತ್ರಿಸಿ ಚಿಂತಿಸಿ ಸುಯ್ಯುತಿದೆ
ಎಲ್ಲಿರುವುದೊ ಅದು
ಎಂತಿರುವುದೊ ಅದು
ನೋಡಬಲ್ಲೆನೇ ಒಂದು ದಿನ
ಕಡಲನು ಕೂಡಬಲ್ಲೆನೇ ಒಂದು ದಿನ !

ಸಾವಿರ ಹೊಳೆಗಳು ತುಂಬಿ ಹರಿದರೂ
ಒಂದೇ ಸಮನಾಗಿಹುದಂತೆ !
ಸುನೀಲ ವಿಸ್ತರ ತರಂಗ ಶೋಭಿತ
ಗಂಭೀರಾಂಬುಧಿ ತಾನಂತೆ !
ಮುನ್ನೀರಂತೆ
ಅಪಾರವಂತೆ
ಕಡಲನು ಕಾಣಬಲ್ಲೆನೇ ಒಂದುದಿನ
ಅದರೊಳು ಕರಗಲಾರೆನೇ ಒಂದುದಿನ !

ಜಟಿಲ ಕಾನನದ ಕುಟಿಲ ಪಥಗಳಲಿ
ಹರಿವ ತೊರೆಯು ನಾನು !

ಎಂದಿಗಾದರೂ ಕಾಣದ ಕಡಲಿಗೆ
ಸೇರ ಬಲ್ಲೆನೇನು ?
ಆ ಪುಣ್ಯವೆಂದಿಗೊ
ಕಾಲವೆಂದಿಗೊ
ಕಡಲಿನ ಆ ರತ್ನಗರ್ಭದಲಿ
ಸೇರಬಹುದೆ ನಾನು
ಕಡಲ ನೀಲಿಯೊಳು
ಕರಗಬಹುದೆ ನಾನು ?

# ಕಡಲನ್ನು ಕಂಡಾಗ

ಕಡಲ ಕಾಂಬಾಸೆ ಕಡಲುವರಿದಿತ್ತು ನನ್ನ ಮನಸಿನೊಳಗೆ
ವರುಷವಿಪ್ಪತ್ತುಮೂರು ತುಂಬುತಿದೆ ನಿನ್ನ ಕಂಡ ದಿನಕೆ
ಕಡೆಗು ಬಲು ದಿನಕೆ ನಿನ್ನ ದರ್ಶನವು ಲಭಿಸಿತೆನಗೆ ಜಲಧಿ,
ಇಂದು ಬಂದಿರುವೆ ನಿನ್ನ ಎದುರಿನಲಿ ದೈವಕೃಪೆಯು ಬಲದಿ.

ನಿನ್ನ ಭೂಮತೆಯ ಭವ್ಯ ಚಿತ್ರವನು ಮನದಿ ಮೂಡಿಸಿದ್ದೆ
ನಿನ್ನ ಘೋಷವನು ನನ್ನ ಕಲ್ಪನೆಯ ಕಿವಿಯೊಳಾಲಿಸಿದ್ದೆ.
ಇಂದು ಕಂಡೆನಾ, ತುಂಬಿ ಬಂದಿತೋ ನನ್ನ ಮನದ ಬಯಕೆ
ಕಂಡ ಸಂತಸಕೆ ನನ್ನ ವಾಣಿಯಲಿ ಹಾಡುವಾಸೆ ನನಗೆ !

ಎತ್ತ ನೋಡಿದರು ನೀಲ ನೀಲ ಜಲ ಕಲ್ಲೋಲ ರುಂದ್ರಮಾಲೆ !
ಕೆಳಗೆ ನೀಲ ಜಲ ಮೇಲೆ ನೀಲತಲ, ದಿಟ್ಟ ಸೋಲುವೋಲೆ.
ಎಲ್ಲೆಲ್ಲು ನೀಲ ; ಭೂಮತೆಯ ಕುರುಹು ಬರಿಯ ನೀಲಿಯಂತೆ.
ನೀನೆ ತೋರುತಿಹೆ ನನ್ನ ಕಂಗಳಿಗೆ ನೀಲ ಬೊಮ್ಮನಂತೆ !

ಏನು ಅಬ್ಬರವೊ ಏನು ಉಬ್ಬರವೊ ನಿನ್ನ ಗರ್ಭದಲ್ಲಿ !
ರುದ್ರ ವೀಣೆಗಳ ತುಮುಲ ನಾದವೋ ನಿನ್ನ ಮೊರೆವ ರಾಗ
ಪ್ರಳಯ ಭೈರವನು ಲೋಕ ಲೋಕಗಳ ಮೆಟ್ಟಿಕುಣಿಯುವಾಗ
ಅವನ ತಾಂಡವಕೆ ತಾಳ ಹಾಕುವೆಯ ತೆರೆಯ ತಾಳದಲ್ಲಿ ?

ನಾದ ಬ್ರಹ್ಮದಾ ವ್ಯಕ್ತ ರೂಪವೋ ನಿನ್ನ ವೇದಘೋಷ !
ಲೋಕ ಲೋಕಗಳ ಮೋಹನಿದ್ರೆಯಿಂದೆಚ್ಚರಿಸೆ ಮೊಳಗುವಂತೆ
ವಿಶ್ವಕವಿಯು ತಾ ಕಟ್ಟಿ ಹಾಡುತಿಹ ಚೈತನ್ಯ ಕವನದಂತೆ
ಏನು ಆದರೂ ಏನು ಹೋದರೂ ನಿಲ್ಲದಂಥ ಘೋಷ !

ಸೃಷ್ಟಿಕರ್ತನನು ಕುರಿತು ಪ್ರಾರ್ಥನೆಯ ಮಾಡುತಿರುವೆಯೇನು ?
ನಿನ್ನ ಪ್ರಾರ್ಥನೆಗೆ ನನ್ನ ಪ್ರಾರ್ಥನೆಯ ಬೆರಸುತಿರುವೆ ನಾನು.
ನಿತ್ಯ ಪ್ರಾರ್ಥನೆಯು ಸತ್ಯಚೇತನವೆ ನಮಸ್ಕಾರ ನಿನಗೆ.
ನಿನ್ನ ಘೋಷದಲಿ ನನ್ನ ದನಿಯನೂ ಬೆರಸುವಾಸೆ ನನಗೆ.

ನಾನಿಲ್ಲಿ ಬರುವ ಮೊದಲಲ್ಲು ನೀನು ಇಂತೆ ಮೊರೆಯುತಿದ್ದೆ
ನಾನು ಬಂದಿಲ್ಲಿ ನಿಂತು ನೋಡುತಿರೆ ಇಂತೆ ಮೊರೆಯುತಿರುವೆ.
ನಾನು ಹೋದರೂ ಎಂದಿನಂತೆ ನೀನಿಂತೆ ಹಾಡುತಿರುವೆ !
ನೀಲ ಬಾನಿನಾ ಭವ್ಯಮೌನದೆದೆಗೇನೊ ನುಡಿಯುತಿರುವೆ !

ಏನು ಆಟವೋ ಎಂಥ ಬೇಟವೋ ನಿನ್ನ ತೆರೆಗೆ ದಡಕೆ
ನಿಮಿಷ ನಿಮಿಷಕೂ ಬಂದು ದಡದೆಡೆಗೆ ಬಡಿಯುವಾಸೆ ಅವಕೆ !
ವರುಷ ವರುಷಗಳು ಉರುಳಿ ಹೋದರೂ ಮುಗಿಯದಂಥ ಆಟ
ಬುವಿಯ ಹೆಣ್ಣಿಗೂ ಕಡಲ ಗಂಡಿಗೂ ತೀರದಿರುವ ಬೇಟ !

ಭವ್ಯ ಕಲೆಗಾರನಲ್ಪಕೃತಿಯಲೂ ಚೆಲುವು ಪೂರ್ಣಗೊಂಡು
ಬರುವತೆರದಿ, ಇದೊ ಕಪ್ಪೆಚಿಪ್ಪುಗಳು ಬೀಳುತಿಹವು ಬಂದು !
ಕಡಲಗರ್ಭದಾ ಮುತ್ತು ರತುನಗಳು ಇಂತು ಬಾರವೇಕೆ ?
ಕಪ್ಪೆಚಿಪ್ಪುಗಳೊ ಮುತ್ತು ರತುನಗಳೊ, ಅದರ ಘನತೆ ಅದಕೆ !

ತೆರೆಯ ಚವರಿಗಳೊ ವಾದ್ಯ ಘೋಷಗಳೊ, ನಿಜಕು ರಾಜ ನೀನು
ನಿನ್ನ ಗಾಂಭೀರ್ಯ ನಿನ್ನ ವಿಸ್ತಾರ ಮತ್ತೆ ಯಾರಿಗಿಹುದು ?
ಬುವಿಯ ತೆರದಲ್ಲಿ ಬುವಿಯ ದೊರೆಗಳಿಗೆ ದಾಸನಲ್ಲ ನೀನು
ನಿನ್ನ ರಾಜತನ ನಿನ್ನ ವೈಭವವು, ನಿನಗೆ ಮೀಸಲಹುದು !

ನಿನ್ನ ನೀಲ ಜಲದೆದೆಯ ಮೇಲುಗಡೆ ಕೋಟಿ ನಾವೆ ತೇಲಿ
ಹೋಗುತಿಹವು ಕಾಣ್ ತೆರೆಗಳಗ್ರದಲಿ ತೃಣಗಳನ್ನು ಹೋಲಿ !
ಒಮ್ಮೆ ನಿನ್ನ ತೆರೆ ಎತ್ತಿ ಎಸೆಯಿತೋ, ಮುಗಿಯಿತದರ ಪಾಡು
ಮನುಜ ಸಾಹಸದ ಕಿಡಿಗಳಂತೆ ಅವು ತೇಲುತಿಹವು ನೋಡು !

ಕಡಲ ಕರೆಯ ನುಣ್ ಮಳಲ ಮೇಲುಗಡೆ ನನ್ನ ಹೆಸರ ಬರೆದೆ !
ಒಂದು ತೆರೆಯನಿನ್ನೊಂದು ಅಟ್ಟಿ ಮುಂದೋಡುತಿರುವ ಪರಿಗೆ
ನಿಬ್ಬೆರಗು ಹೊಡೆದು ತೆರೆಯ ಲೀಲೆಯನು ನೋಡಿ ನೋಡಿ ನಿಂದೆ,
ಅಯ್ಯೊ ಕಂಡೆನೇ, ತೆರೆಯು ನುಗ್ಗಿತೋ ನನ್ನ ಕಾಲಕೆಳಗೆ !

ಬಂದ ತೆರೆಯು ಭುಸ್ಸೆಂದು ನುಗ್ಗಿ ಅಪ್ಪಳಿಸಿತಯ್ಯ ದಡಕೆ !
ಮರಳ ಮೇಲೆ ಬರೆದೆನ್ನ ಹೆಸರು ನಿರ್ನಾಮವಾಯ್ತು ಚಣಕೆ.
ಹೆಸರು ಹೋಯಿತೇ ಎಂದು ಕೊರಗುತಿರೆ ಏನೊ ಆಯ್ತು ಮನಕೆ.
ನನ್ನ ಬೆಳ್ತನಕೆ ನಾನೆ ನಾಚುತ್ತ, ನನ್ನ ನೋಡಿ ನಕ್ಕೆ !

ನಿನ್ನ ಕಾಣುತ್ತ ನಿನ್ನರೂಪದಲಿ ನಾನೆ ಕರಗಿಹೋದೆ
ಮತ್ತೆ ನೋಡಿದರೆ ನೀಲ ನೀಲ ಜಲ ನೀನೆ ಎಲ್ಲವಾದೆ !
ನಿನ್ನ ಘೋಷದಲಿ ನನ್ನ ಎದೆಯ ದನಿ ಲೀನವಾಯಿತೆಲ್ಲ
ನಿನ್ನ ಎದುರಿನಲಿ ನನ್ನ ತನಕೆ ಏನೇನು ಉಳಿಯಲಿಲ್ಲ !

# ನೆಪ

ನೆರೆಮನೆಯ ಬಾನುಲಿಯ ಎದೆಯಿಂದ ವೀಣೆದನಿ
ತೇಲಿ ಅಲೆಯಲೆಯಾಗಿ ಬರುತಲಿಹುದು !
ಯಾರು ನುಡಿಸುತಲಿಹರೊ ; ಯಾರು ನುಡಿಸಿದರೇನು,
ಕೇಳುವೆದೆಯೊಳಗದರ ಮಾಧುರ್ಯವಿಹುದು.

ಆಹ ಕೇಳು, ಮಿಡಿಯುತಿದೆ ಶೋಕ ಗೀತೆಯನೊಂದ,
ಎದೆಯ ತಂತಿಯನೆಲ್ಲ ಮೀಂಟಿ ಮೀಂಟಿ
ಎದೆಯಾಳದಲಿ ನೂರು ನೋವುಗಳು ಸುಯ್ಯುತಿವೆ
ಹರಿದು ಬರುವೀ ರಾಗ ರಸವನೀಂಟಿ !

ಹಾಡು ನಿಂತುದು ಅಲ್ಲಿ; ನಿಶ್ಯಬ್ದವಾಯ್ತಿರುಳು
ಜೋಗುಳವನಾಲಿಸಿದ ಶಿಶುವಿನಂತೆ !
ನನ್ನ ಎದೆಯೊಳಗಿನ್ನು ಮೊರೆಯುತಿಹುದಾ ವೀಣೆ
ಹೆಪ್ಪುಗಟ್ಟಿದ ಎದೆಯ ಕಡೆಯುವಂತೆ !

ಯಾವ ಹಾಡನೊ ಕೇಳಿ ಇಂತೇಕೆ ತುಡಿವುದೆದೆ ?
ಅದಕು ಇದಕೂ ಏನು ಸಂಬಂಧವೊ !
ತುಂಬಿರುವ ಎದೆ ತನ್ನ ನೋವುಗಳ ತುಳುಕಾಡ-
ಲೊಂದು ನೆಪವನು ಕಾದು ನಿಲುವುದೇನೊ !

ಕುಲುಮೆ ಕೆಂಡಗಳಾರಿ ಬೂದಿ ಮುಸುಗುತಲಿರಲು
ಮೇಲಿನಿತು ಇದ್ದಿಲನು ಒಟ್ಟಿ ತಿದಿಯೊತ್ತಿ
ಉರಿಯ ಕೆರಳಿಸುವಂತೆ ಆವಾವುದೋ ನೆಪವೊ
ಎದೆಯ ನೋವನು ಮರಳಿ ಕೆರಳಿಸುವುದೆತ್ತಿ !

# ಕಸಪೊರಕೆ

ಯಾವ ಕೈಯನೊ ಸೇರಿ ಕಸವ ಗುಡಿಸಿದ ಮೇಲೆ
ತಾನು ಗುಡಿಸಿದೆನೆಂಬ ಬಿಂಕವಿನಿತಿಲ್ಲದೆಯೆ
ಮೌನದಲಿ ಮಲಗಿಹುದೆಂತು ನೋಡಾ ಕಸಪೊರಕೆ !
ದಿನ ದಿನವು ಗುಡಿಸುವುದು ಕಸವನ್ನು ; ಮರು ಚಣಕೆ
ಎಲ್ಲಿಯೋ ಮಲಗುವುದು ! ಕಸಪೊರಕೆಯಲ್ಲದೆಯೆ
ಬೇರೆ ಗುರುವೇತಕ್ಕೆ ಮಾನವತೆಯನು ಮೇಲೆ
ಎತ್ತಿಕೊಂಡೊಯ್ಯುವುದಕೆ ! ಈ ಜಗವೆಂಬುದೊಂದು
ಕಸ ತುಂಬಿದರಮನೆಯೊ ! ಯುಗ ಯುಗದಿ ಒಂದೊಂದು
ಹಿರಿಯ ಪೊರಕೆಯು ಬಂದು ಗುಡಿಸುವುದು ಈ ಮನೆಯ !
ಆ ಪೊರಕೆಯನೆ ನಾವು 'ಅವತಾರ' ವೆನ್ನುತ್ತ
ಪೂಜಿಪೆವು ! ದಿನ ದಿನವು ಕಸ ಮತ್ತೆ ತುಂಬುತ್ತ
ಹೋಗುವುದೆ ಈ ಮನೆಯ ವೈಶಿಷ್ಟ್ಯ ! ಈ ಮನೆಯ
ಶುದ್ಧಿಕರಣವೆ ನಮ್ಮ ಕಸಪೊರಕೆಗಿರುವ ಗುರಿ,
ಕಸಪೊರಕೆಯೆನಗೆ ಗುರು ; ಮೇಣೆನ್ನ ಬಾಳಗುರಿ !

## ಕ್ರಿಸ್ಮಸ್

ಕ್ರಿಸ್ಮಸ್ಸು ಬಂದಿಹುದು ; ಕ್ರಿಸ್ತನೆದೆಯಂದದಲಿ
ಶೋಭಿಸಿದೆ ತಿಳಿನೀಲಿಯಾಕಾಶ ! ಬೆಳ್ಳಕ್ಕಿ
ಮಾಲೆಗಳು ತೇಲುತಿವೆ ದೇವದೂತರ ತೆರದಿ.
ಚರ್ಚಿನ ಗಂಟೆ ಘೋಷಿಸಿದೆ ಗಂಭೀರ ಕಂಠ.
ದಲಿ ಗುರುವಿನಾದೇಶವಂ ; ಹೊನಲಾಗಿ ಹರಿವ
ಪ್ರಾರ್ಥನಾ ಗೀತದಲಿ ಮುಳುಗಿಹುದು ಮಂದಿರವು !
ಅದೊ ಒಳಗೆ, ಮೋಂಬತ್ತಿಗಳ ಮಬ್ಬು ಬೆಳಕಿನಲಿ
ನೋಡು ಕ್ರಿಸ್ತನ ದಿವ್ಯ ಮಂಗಳ ಮೂರ್ತಿ ! ಅಂದು
ಗೋಲ್ಗೊಥದ ಗುಡ್ಡದಲಿ ಶಿಲುಬೆಯಜ್ಞಕೆ ತನ್ನ
ತನುವ ತೆತ್ತಾ ಧೀರಸುಂದರ ಪುರುಷ ! ಜಗದ
ಗಂಭೀರತೆಯೆ ಮುಖ ಬಿಂಬವಾದಂತೆ ; ಕಣ್ಣು-
ಗಳೆರಡು ಕರುಣಾ ರಸದ ಕಡಲೆಂಬಂತೆ ; ಆ
ಮೂರ್ತಿ ! 'ದೇವರ ರಾಜ್ಯವಿಹುದು ನಿಮ್ಮೊಳಗೆ'
ಎಂದರೂ ಮಾನವತೆ ತೊಳಲುತಿದೆ ತಮದೊಳಗೆ !

# ಒಳಗೆ

ಮನೆಯ ಬಾಗಿಲ ಹೊರಗೆ ಸುಡುವ ಬೇಸಗೆ ಬಿಸಿಲು
ಮನ ಚಿಂತೆಗಳ ಹುತ್ತ ; ಮೇಲೆ ಬೆವರಿನ ಜಳಕ !
ಇಂಥ ಹೊರ ಜಗದಿಂದ ಮನೆಯ ಹೊಸಿಲಿಗೆ ಬಂದ-
ರಿದೆ ಒಳಗೆ ಸಂಸಾರ ವೃಕ್ಷದ ನೆಳಲು ! ಮಡದಿ-
ಯಕ್ಕರೆಯ ಹೂಗಂಪು ಹರಡಿಹುದು, ದೇವರೆದು-
ರಿಗೆ ಉರಿದು ಗೆರೆಗೆರೆಯ ಲಾಸ್ಯದಲಿ ಕೋಣೆಯನು
ತುಂಬುವ ಊದುಬತ್ತಿಯ ನವುರು ಗಂಧದಂತೆ !
ಬಂದೊಡನೆ ಬಾಗಿಲಲಿ ತಬ್ಬುವುದು ಮಗುವಿನೆಳ-
ನಗೆಯೆ ತಿಂಗಳಿನ ಬಳ್ಳಿ ತೋಳಿನ ಬಳಸು ! ಆ
ಜೊಲ್ಲುಗುವ ಜೇನ್‌ದುಟಿಯ ತೊದಲು ಮುತ್ತಿನಮಾತು
ಮನದ ಬವಣೆಗೆ ಮದ್ದು ಬೇಸಗೆಯ ನಡು ಹಗಲು
ತಿಳಿನೀರ ತೊರೆಯೊಳಗೆ ಮಲಗಿ ಮಿನುಗುವ ಹರಳು-
ಗಲ್ಲುಗಳ ರೀತಿಯಲಿ ತೋರುತಿದೆ ಈ ಬಾಳು
ಇಂಥ ಒಲವಿನ ತೊರೆಯೊಳದ್ದಿರಲು ನಾವುಗಳು !

# ಬಂಡೆ-ಹೂವು

ಬೆಟ್ಟ ಬಂಡೆಯ ಮೇಲೆ ಕಲ್ಲೆ ಮರವಾದಂತೆ
ದೇವಗಣಗಲೆಮರವು ನಿಂತು ಮುಗಿಲಿಗೆ ಹೂವಿ-
ನಾರತಿಯನೆತ್ತುತಿದೆ ! ಎಲೆಗಳೊಂದಾದರೂ
ಇಲ್ಲ ; ಹಿಡಿಹಿಡಿ ಹಿಡಿದ ಹೂವೆಲ್ಲ ಬಿಳಿದು ; ಅಹ
ಹೂವು ಎಂಥ ಮಿದು ! ಬಂಡೆಯೊ ಘಟ್ಟ ; ಒಲು ಘಟ್ಟ
ಒಂದು ಮೃದು ಮತ್ತೊಂದು ಕಠಿಣ ; ಈ ಮೃದುತೆ ಆ
ಕಠಿಣತೆಯು ಮತ್ತೊಂದುರೂಪ ! ಕಾಠಿಣ್ಯವೀ-
ಮೃದುತೆಯಿನ್ನೊಂದುರೂಪ ; ಈ ಮೃದು ಕಠಿಣವೆಂ-
ಬೆರಡು ಬೇರೊಂದು ನಿಲವಿನ ರೂಪ ! ನೋಡು ಈ
ಹೂವನರಳಿಸಿದ ಮರ ಆ ಕಲ್ಲುಬಂಡೆಯೊಳು
ಬೇರೂರಿ ರಸವ ಹೀರುತಿದೆ ; ಕಲ್‌ಗುಂಡಿನೆದೆ-
ಯಲ್ಲು ಕೋಮಲತೆಯರಳಿಸುವ ಮೂಲರಸವಡ-
ಗಿಹುದು ! ಈ ಬಂಡೆಯೇ ಅಲ್ಲಿ ಮರದತುದಿಯಲಿ
ಹೂವಾಗಿ ಅರಳಿಹುದು ! ಓ ಮನವೆ ನೋಡಿ ಕಲಿ !

# *ಒಂದು ರಾತ್ರಿ

ನನ್ನೆದೆಗೆ ಎದೆಯಿಟ್ಟು ಮಲಗಿದ್ದನವನಿಲ್ಲಿ
ಕ್ಷಣದಂತೆ ಕಳೆದೊಂದು ರಾತ್ರಿಯಲ್ಲಿ
ಉಳಿದವರ ಜೊತೆಯಲ್ಲಿ ಕಾಳಗದ ಕಣಕಾಗಿ
ಎದ್ದು ನಡೆದನು ಅವನು ಮುಂಬೆಳಗಿನಲ್ಲಿ.
ಎಷ್ಟಾದರೂ ನಾನು ಅಬಲೆಯಾದುದರಿಂದ
ಬೀಳುಕೊಟ್ಟೆನು ಅವನ ಅತಿ ಮೌನದಲ್ಲಿ—

ಇನ್ನೊಬ್ಬಳೆದೆಯವನ ಅಪ್ಪಿಕೊಂಡಿಹುದೀಗ
ಮುಗಿವಿಲ್ಲದಿಹ ಕಾಳ ರಾತ್ರಿಯಲ್ಲಿ!
ಮುಂದೆ ಎಂದೆಂದಿಗೂ ಕಾಳಗದ ಕಣಕಾಗಿ
ನಡೆಯಲಾರನು ಅವನು ಮುಂಬೆಳಗಿನಲ್ಲಿ.
ಏಕೆನಲು, ಅವಳವನ ತಾಯಿ, ಭೂದೇವಿ
ಬಿಡಲಾರದಪ್ಪಿಹಳು ತನ್ನ ಎದೆಯಲ್ಲಿ!—

---

*Wilfried Gibson ಎಂಬ ಕವಿಯ One Night ಎಂಬ ಕವಿತೆಯ ಅನುವಾದ.

# ಜಾರಿದ ಹೂವಿಗೆ

ಅವಳ ಸಿರಿಮುಡಿಯಿಂದ ಕೆಳಗೆ ಉರುಳಿತು ಹೂವು
ಯಾಮಿನಿಯ ಮುಡಿಯಿಂದ ನಕ್ಷತ್ರದಂತೆ !
ಹಿಂದೆ ನಡೆದವ ನಾನು, ಕೈಗೆತ್ತಿಕೊಂಡೆನದ
ಏನು ಸೊಗಸಾಗಿತ್ತು ಮಲ್ಲಿಗೆಯ ಹೂವು!
ಅವಳ ಕೇಶದ ಕಂಪು ಹೂಗಂಪಿನೊಡವೆರೆದು
ಘಮು ಘಮಿಸುತಿತ್ತದರ ಹೃದಯದಲ್ಲಿ.
ಎಂಥ ಕಲ್ಲೆದೆಯವಳೊ, ಇಂಥ ಹೂವನು ಮರೆತು
ನಡೆದಳಲ್ಲಾ ಅವಳು ಅತಿ ಬಿಂಕದಲ್ಲಿ !
ಇದ ಮುಡಿದ ತರುಣಿಯದೊ ನಡೆಯುವಳು ದೂರದಲಿ
ಹೂವು ಜಾರಿದುದೆಂಬ ಅರಿವಿಲ್ಲದೆ.
ಅಪ್ಸರೆಯು ತೊರೆದೊಂದು ಮರ್ತ್ಯಾಮರ್ತ್ಯ ಶಿಶು–
ವಿನ ತೆರದಿ ಹೂವಿಹುದು ದಿಕ್ಕಿಲ್ಲದೆ !
ಮನೆಯ ತಲುಪಿದ ಮೇಲೆ ಕೊರಗುವಳೆ ಆ ತರುಣಿ
ಹೂಜಾರಿ ಹೋದುದಕೆ ? ನಾನರಿಯೆನು.
ನಾನಿದಕೆ ಮರುಗುವೆನು; ಯಾವ ವಸ್ತುವೊ ಏನೊ
ಸೆಳೆವುದಚ್ಚರಿಯಲ್ತೆ ನಮ್ಮೆದೆಯನು !

...ರ ಗ್ರಂಥಾಲಯ
... ... ...

# ಭಗ್ನ ಚೆಲುವೆ

ಯೌವನದ ತೇರಿನೊಲು ನೀ ತೇಲಿ ಬಂದೆ
ನನ್ನ ಬಳಿಯೇ ಹಾದು ಮುಂದೆ ನಡೆದೆ
ನೀ ನಡೆದ ಮೇಲೆ ನಾ ಮರುಗಿದೆನು ನಿನಗೆ
ಬಲು ಮೌನದೊಳಗೆ !

ವರುಷಗಳ ಕೋಡೊತ್ತಿ ಕಣ್ಣಸುತ್ತಲು ಕೊರೆದ ಗೆರೆಯ ಉಂಗುರವ,
ತೆಳುಬಿದ್ದ ಗಲ್ಲಗಳ, ನಿಟ್ಟುಸಿರು ಕಂದಿಸಿದ ಅಧರಗಳ ಇರವ
ಬಣ್ಣ ಸ್ನೋ ಪೌಡರನು ಮೆತ್ತಿ ಚೆಲುವನು ಹೇರಿ ಮೆರೆಸುವೀ ಪರಿಗೆ
ಮರುಗಿದೆನು ನಿನಗೆ !

ಕಡಲತ್ತ ಹರಿದ ಹೊಳೆಯನು ಮತ್ತೆ ಉಗಮದೆಡೆ ತಿರುಗಿಸುವ ಬಯಕೆ
ಹಾರಿ ಹೋದಾ ಕಂಪ ತಿರುಗಿ ತುಂಬುವ ಬಯಕೆ ಹೂವಿನೊಳಗೆ
ಸಾಧ್ಯವೇ ಬದುಕಿನೊಳಗೆ ?

109027

ಓ ಭಗ್ನಚೆಲುವೆ
ನಿನ್ನನು ಕಂಡು ಮರುಗಿ ನಿಲುವೆ.
ಯುಗ ಯುಗದ ಸಂಸ್ಕೃತಿಯ ನಾಗರೀಕತೆಯ
ಪುನರುಜ್ಜೀವನದ ವ್ಯಥೆಯ ಕಥೆಯನು ನೆನೆದು
ನಿಡುಸುಯ್ಯುವೆ !

# ಸಂಗಮ

ಇದು ಜೀವನದ ಸಂಗಮ.
ಯಾವ ಪರ್ವತ ಲಿಂಗದಿಚ್ಛೆ ಈ ತೆರದಿ
ಜಂಗಮವಾಗಿ ಬಂದಿಲ್ಲಿ ಸಂಗಮವಾಯ್ತೊ!
ಒಂದನೊಂದನು ಹುಡುಕಿ ಬಂದೆರಡು ಚೇತನಕೆ
ಇಲ್ಲಿ ಬಾಳೊಂದಾಯ್ತೊ
ಏನು ತೆರೆ ಏನು ನಿರ್ಘೋಷ!
ಆ ದಡದಿಂದ ಈ ದಡಕೆ
ಈ ದಡದಿಂದ ಆ ದಡಕೆ
ತುಂಬಿ ಗಂಭೀರವಾಗಿದೆ ಹೊನಲಿನಾವೇಶ!
ಸೆಳೆತಕೆ ಸಿಕ್ಕ ಮರವೋಟು ಕಸಕಡ್ಡಿ
ಅದರ ಒಳಗೆ
ಚೇತನದ ಸುಳಿಯಲಿ ಸಿಕ್ಕ ಜಡಕೂ ಕೂಡ
ಚೈತನ್ಯ ಬಂದ ಹಾಗೆ
ಹೇಗೊ ಎಲ್ಲೋ ಬಿದ್ದು ಕೊಳೆವ ಬದುಕಿಗೆ ದೈವ-
ಕೃಪೆ ದೊರೆತ ಹಾಗೆ
ಸಾಗುತಿವೆ ಹೊನಲಿನೊಳಗೆ!
ಇದು ಕಡಲೆಡೆಗೆ ನಡೆವಂಥ ಹಿರಿ ಚೇತನ
ಹಿರಿದರೆಡೆ ನಡೆವವರು ಹಿರಿಯರಪ್ಪರು ಕಾಣ!
ಓ ಹೊನಲ ರಾಜ
ಒಯ್ದು ಮುಟ್ಟಿಸು ನನ್ನ ಎದೆಯ ಹಂಬಲನು, ಆ
ಮೊರೆ ಮೊರೆವ ಮುನ್ನೀರಿಗೆ.
ನಾಲ್ಕು ಹನಿ ನೀರಾಗಿರುತಿದ್ದೆನೇ ನಾನು,
ಸಂಗಮಿಸಿ ಬರುತಿದ್ದೆ ನಿನ್ನ ಜೊತೆಗೆ.
ನಾವು ಮನುಜರು ನೋಡು
ನೂರು ಕನಸನು ತುಂಬಿ ಸುಯ್ವುದೆಮ್ಮಯ ಪಾಡು!

# ಸಂಕ್ರಾಂತಿ

ಹಗಲಿನ ಹಬ್ಬದ ಜಾತ್ರೆಯು ಮುಗಿಯಿತು
ರವಿ ಸಂದನು ಪಡುವಣ ಗುಡಿಗೆ.
ಕತ್ತಲ ಕಣಿವೆಯೊಳುರುಳುತ ನರಳುವ
ಬೆಳಕಿನ ತೊರೆಯೊಲು ಸಂಜೆಯಿರೆ
ಭೀತಿಯ ಭೂತವು ಜಡೆಯ ಬಿಚ್ಚಿದೊಲು
ಹಿರಿಯಾಲದ ಮರ ನಿಂತಿರಲು
ಕೊಂಬೆ ಕೊಂಬೆಯಲಿ ದುರ್ಮಂತ್ರದವೊಲು
ಎನಿತೋ ಬಾವಲಿ ಜೋತಿರಲು
ಮನ ಬೆದರಿತು ಆ ನೋಟವ ನೋಡಿ
ಜಗವನೆ ಮುಸುಕಿರೆ ಕತ್ತಲ ಮೋಡಿ !

ಚಣ ಯುಗವಾಯಿತು, ಮನ ಹಾರೈಸಿತು
ಬೆಳಕಿನ ಕುಡಿಯೊಂದನು ಬಯಸಿ
ನಿರಾಶೆಯಾಗಸದಾಸೆಯ ಕಿಡಿಗಳೊ
ಎಂಬೊಲು ತಾರೆಗೆ ಕಣ್ ಸುಳಿಸಿ
ಮಿನುಗಲು, ಕತ್ತಲ ಕೊಳದಿಂದರಳಿತೊ
ಬೆಳಕಿನ ಹೂವೊಂದೆಂಬವೊಲು,
ತಿಂಗಳು ಮೂಡಿತು ಬೆಳಕನು ಸುರಿಸಿತು
ಜಗವೇ ಅಚ್ಚರಿಗೊಂಬವೊಲು
ಕತ್ತಲು ಕರಗಿತು ಬೆಳಕಿನೊಳಿಳಿದು
ಬೆಳಕೊಂದೇ ಹಬ್ಬಿತು ಬೆಳೆ ಬೆಳೆದು.

ಬೆಳಕಿನ ಹೂವಿನ ಬಂಡನು ಆಶಿಸಿ
ಹೊರಟವೊ ಕತ್ತಲ ದುಂಬಿಗಳು
ತೇಲುವ ಅಮೃತದ ಕುಂಭದ ಬಯಕೆಗೆ
ದಾನವರೆಸೆದಾ ಬಾಣಗಳೊ
ಎಂಬೊಲು ಒಂದೊಂದೇ ಬಾವಲಿಗಳು
ಮರದಿಂದಾ ಚಂದ್ರನ ಕಡೆಗೆ
ಹಾರುತ ಹಾರುತ ಕಡೆಗೊಂದಾದುವು
ತಿಂಗಳ ಬೆಳಕಿನ ಕೃಪೆಯೊಳಗೆ
ಬೆರಗಾದುದು ಮನ ದೃಶ್ಯದ ಪರಿಗೆ
ಅನಿರೀಕ್ಷಿತ ಸಂಕ್ರಾಂತಿಯ ಕೃಪೆಗೆ!

# ಅಲೆಗಳು

ಅಹಾ ಕೆರೆಯ ತೆರೆಗಳೇ,
ಮುಗಿಲ ಬಣ್ಣ ಮುತ್ತು ಕೊಡುವ
ನುಣ್ಗದಪಿನ ಮರಿಗಳೇ
ಏನು ಓಟ ಎಂಥ ಆಟ
ಕುಲು ಕುಲು ಕುಲು ನಗೆಯಲಿ
ಏನೊ ಮಾತ ನುಡಿವಿರಲ್ಲ
ಸುಳಿಗಾಳಿಯ ಕಿವಿಯಲಿ !

ಸರಸಿ ಪಡೆದ ಮುಗುಳು ನಗೆಯ
ಸುಳಿದಾಡುವ ಮಕ್ಕಳೇ
ಕೆರೆಯ ಮನಸು ದಡಕೆ ನುಡಿವ
ತುಂಬೊಲವಿನ ನುಡಿಗಳೇ
ಬೆಳಗಿನಲ್ಲಿ ಬೈಗಿನಲ್ಲಿ
ಬಾನು ಬಣ್ಣ ಬಳಿಯೆ ಕುಣಿವ
ವಿವಿಧ ನೃತ್ಯಕಾರರೇ
ಆ ದಡದಿಂದೀ ದಡದೆಡೆ
ಉತ್ಸಾಹದಿ ನಡೆವಿರಿ
ಆದರಯ್ಯೊ ಕಲ್ಲು ದಡದ
ಎದೆಗೆ ಬರಿದೆ ಬಡಿವಿರಿ !
ಇಷ್ಟೆ ನಿಮ್ಮ ನಡೆಯ ಗುರಿ
ಅರಿಯ ಬಹುದೆ ನಿಮ್ಮ ಪರಿ !

ಆ ರಹಸ್ಯವೇನೆ ಇರಲಿ
ಧನ್ಯರಯ್ಯ ನೀವ್ಗಳು
ಬೆಳುದಿಂಗಳು ಬಂದು ಕುಣಿದು
ನಕ್ಷತ್ರವು ನೋಡಿ ತಣಿದು
ಬೀಸುಗಾಳಿ ಹಾಡಿ ನಲಿದು
ರಸವ ತುಂಬಿದಂಥ ಬಾಳು
ವಿಫಲವಹುದೆ ಕಡೆಯಲಿ !

# ಶ್ರೀ ವಿವೇಕಾನಂದರಿಗೆ

ರಾಮಕೃಷ್ಣರು ದಿವ್ಯ ಯೋಗ ಧನುವಿಗೆ ತೊಟ್ಟ
ಬ್ರಹ್ಮಾಸ್ತ್ರ ನೀನು
ವಿಶ್ವದಂತಸ್ಸತ್ವ ಮೂರ್ತಿಗೊಂಡಿಳೆಗಿಳಿದ
ಕ್ರತು ಶಕ್ತಿ ನೀನು
ಸಂಶಯದ ದುರ್ಗವನು ಸೀಳಿ ಶ್ರದ್ಧೆಯ ಧ್ವಜವ
ನಟ್ಟ ವಿಜಿಗೀಷು.
ಪರಮಹಂಸಾಚಲದ ಶಿವಗಂಗೆಯನು ತಂದು
ಜಗಕೆಲ್ಲ ಹರಿಸಿರುವ ಯೋಗ ಪುರುಷ
ಮುಟ್ಟಿದ್ದು ಹೊನ್ನಾಯ್ತು ದಿವ್ಯ ಪರುಷ !

ನಿನ್ನ ವಾಣಿಯು ತಟ್ಟಿ, ಚಿಪ್ಪೊಡೆದು ಅದರಲ್ಲಿ
ಹುದುಗಿದವರೆದ್ದೆದ್ದು ಹೊರ ಬಂದರು.
ಕ್ರಿಮಿ ಎಂದು ಮಲಗಿದವರೆದ್ದು ಕುಲಶೈಲದೊಳು
ಮುಗಿಲೆಡೆಗೆ ಮುಡಿ ಎತ್ತಿ ನಿಂತುಕೊಳಲು
ಏಳು ಕಡಲಿನ ತೆರೆಯು ತಾಳವನು ಹಾಕಿದವು
ದಿಕ್ಕುದೆಸೆ ಹಾಡಿದವು ಜಯಗಾಥವ !
ಪೂರ್ವ ಪಶ್ಚಿಮವೆರಡು ಒಂದನೊಂದನ್ನಪ್ಪಿ
ಕಂಡು ಕೊಂಡವು ದಿವ್ಯ ಹೃದಯಾರ್ಥವ !

ನೆಲಕು ಮುಗಿಲಿಗು ಏಕವಾಗಿ ನಿಂತ ಮಹಾಂತ
ನಿನ್ನಡಿಯ ಗಂಗೆಯಲಿ ಕರಗಲೀ ಸಾಂತ !

# ಕಾವೇರಿ

(ಶ್ರೀರಂಗಪಟ್ಟಣದ ಬಳಿ)

ರಂಗನಾಥನ ಯೋಗನಿದ್ರೆಗೆ
ಮಂಗಳದ ದನಿಗೈವಳೆ,
ಎರಡು ತೋಳನು ಚಾಚಿ ಶ್ರೀರಂಗನನು
ತೆಕ್ಕೆಯಲಿ ತಬ್ಬಿದವಳೆ
ಒಂದು ಎರಡಾದರೂ ಕಡೆಗೆ ಒಂದೇ ಎಂಬ
ತತ್ವವನು ತೋರಿದವಳೆ !
ತೆರೆ ತೆರೆಯ ನೀರ ವೀಣೆಯಲಿ ವರ
ಸಾವುಗಾನವನು ಹಾಡುವವಳೆ !

ಎದ್ದು ಬಿದ್ದಿಹ ರಾಜ್ಯದವಶೇಷವನು ಸುತ್ತಿ
ಸವಿನುಡಿಯ ಜೋಗುಳದಿ ತೂಗಿದವಳೆ
ನೊಂದ ಕಂದಗೆ ತಾಯಿ ಆರೈಕೆ ಗೈವಂತೆ
ತೋರುವವಳೆ

ಬ್ರಹ್ಮಗಿರಿಯಿಂದಿಳಿದು ಬೆಟ್ಟಗಾಡನು ಕಳೆದು
ಬಯಲು ನಾಡನು ನಗಿಸಿ ನಡೆಯುವವಳೆ
ಗದ್ದೆ ಬಯಲಿನ ಕೆಸರ ಹಾಳೆ ಹಾಳೆಗಳಲ್ಲಿ
ಹಸಿರ ಕವನಗಳನ್ನು ಬರೆಯುವವಳೆ
ಕಡಲೆಡೆಗೆ ಕುದಿಗೊಂಡು ನಡೆಯುವವಳೆ
ನಿತ್ಯರಾಗಿಣಿ ನೀನು ; ಹಾಡಿಕೊಂಡೇ ಗುರಿಯ
ಮುಟ್ಟಿದವಳೆ
ಶ್ಯಾಮ ನೀರಧಿಯಲ್ಲಿ ಕರಗಿದವಳೆ !

# ಕನ್ನಂಬಾಡಿಯಲ್ಲಿ

ಹತ್ತು ದಿಕ್ಕಿನ ಹೊನಲು ಬಂದಿಲ್ಲಿ ಸಂಧಿಸಿವೆ
ಸಂಯಮದ ಕಟ್ಟೆಯಲಿ ಶಕ್ತಿ ಸೆರೆಯಾದಂತೆ !
ಭೋರ್ಗರೆವ ಜಲರಾಶಿ ತೂಬಿನಲಿ ನುಗ್ಗುತಿದೆ
'ನೀರು' ಎಂಬೆನೆ ಇದನು ? ಕ್ರಾಂತಿಗಳ ಸಂತೆ !
ಕೆಳಗೆ 'ಬೃಂದಾವನ'ದಿ ಕುಣಿ ಕುಣಿವ ಬಣ್ಣಗಳ
ಚೆಲುವೆ ! ವಿಶ್ವವನೆ ಬೆರಗುಗೊಳಿಸುವ ನೋಟಗಳ
ಕೂಟ ! ಹೊಗಳಿಕೆಗೆ, ಬಲುಸುಲಭ ಮೆಚ್ಚುಗೆಗೆ, ಇದು
ಪಾತ್ರವಾದಂತೆ, ತೂಬಿನಲಿ ದೂರಕೆ ಹರಿದು
ಕೆಸರು ಗದ್ದೆಗಳಲ್ಲಿ ಹಸುರ ಸೃಜಿಸುವ ಮಾಟ–
ದುಸಿರಾಗಿ, ಹೊನ್ನತೆನೆಯಾಗಿ ತೂಗುವ ನೋಟ
ಮೆಚ್ಚುಗೆಗೆ ಹೊರತಾಗಿ, ದಿನ ದಿನದ ಸಾಮಾನ್ಯ
ಸಂಗತಿಯೊಳೊಂದಾಗಿ ಹೋಗಿಹುದು ! ಸಾಮಾನ್ಯ
ರೂಪದಲಿ ವೈದೋರ್ವ ಮಹಿಮೆಗಿಲ್ಲದ ಹೊಗಳು
ಕುಣಿವಲ್ಪ ಬಣ್ಣಕ್ಕೆ ಸಲ್ಲುತಿಹುದೇಗಳೂ !

# ಜಡೆ

ಲಲನೆಯರ ಬೆನ್ನಿನೆಡೆ
ಹಾವಿನೊಲು ಜೋಲ್ವ ಜಡೆ.
ಕಾಳಿಂದಿಯಂತಿಳಿದು, ಕೊರಳೆಡೆಗೆ ಕವಲೊಡೆದು
ಅತ್ತಿತ್ತ ಹರಿದ ಜಡೆ !
ಚೇಳ್ ಕೊಂಡಿಯಂಥ ಜಡೆ,
ಮೋಟು ಜಡೆ, ಚೋಟು ಜಡೆ,
ಚಿಕ್ಕವರ ಚಿನ್ನ ಜಡೆ !
ಎಣ್ಣೆ ಕಾಣದೆ ಹಿಣಿಲು ಹಿಣಿಲಾಗಿ ಹೆಣೆದ ಜಡೆ
ಬೆವರಿನಲಿ ಧೂಳಿನಲಿ ನೆನೆದಂಟಿಕೊಂಡಿರುವ
ಗಂಟುಜಡೆ !
ಅಕ್ಕ ತಂಗಿಯ ಮುಡಿಯ
ಹಿಡಿದು ನಾನೆಳೆದಂಥ
ಮಲ್ಲಿಗೆಯ ಕಂಪು ಜಡೆ
ಕೇದಗೆಯ ಹೆಣೆದ ಜಡೆ.
ಮಾತೃಮಮತಾವೃಕ್ಷ ಬಿಟ್ಟ ಬೀಳಲಿನಂತೆ
ಹರಡಿರುವ ತಾಯ ಜಡೆ !
"ಕುರುಕುಲ ಜೀವಾಕರ್ಷಣ ಪರಿಣತ"–ಆ
ಪಾಂಚಾಲಿಯ ಜಡೆ !
ಸೀತೆಯ ಕಣ್ಣೀರೊಳು ಮಿಂದ ಜಡೆ
ಓ ಓ ಈ ಜಡೆಗೆಲ್ಲಿ ಕಡೆ!

*　　　　*

ಸಂಜೆಯಲಿ ಹಗಲು ಕೆದರುವ ಕತ್ತಲೆಯ
ಕಾಳ ಜಡೆ
ಬೆಳಗಿನಲಿ ಇರುಳು ಬಿಚ್ಚುವ ಬೆಳ್ಳನೆಯ
ಬೆಳಕು ಜಡೆ
ಒಮ್ಮೊಮ್ಮೆ ಮುಗಿಲಲ್ಲಿ ತೇಲುತ್ತ ಬರುವಂಥ
ಬೆಳ್ಳಕ್ಕಿಗಳ ಜಡೆ
ಕೊಂಚೆಗಳ ಜಡೆ
ಮರ ಮರದಿ ಬಳುಕುತಿಹ ಹೂಬಿಟ್ಟ ಬಳ್ಳಿ ಜಡೆ !
ಕಾಡು ಬಯಲಿನ ಹಸುರು ಹಸರದಲಿ ಹರಿ ಹರಿದು
ಮುನ್ನಡೆವ ಹೊಳೆಯು ಜಡೆ !
ಶ್ರೇಣಿ ಶ್ರೇಣಿಗಳಾಗಿ ಹರಿದಿರುವ ಗಿರಿಯ ಜಡೆ :
ಗಿರಿ ಶಿವನ ಶಿರದಿಂದ ಹಬ್ಬಿ ಹಸರಿಸಿ ನಿಂದ
ಕಾನನದ ಹಸರು ಜಡೆ
ನಕ್ಷತ್ರಗಳ ಮುಡಿದ ನಟ್ಟಿರುಳ ನಭದ ಜಡೆ !
ಮುಂಗಾರು ಮೋಡಗಳು ದಿಕ್ಕುದಿಕ್ಕಿಗೆ ಬಿಚ್ಚಿ
ಹರಡಿರುವ ಮಳೆಯ ಜಡೆ !
ಚಂದ್ರ ಚೂಡನ
ವ್ಯೋಮ ಕೇಶನ
ವಿಶ್ವವನೆ ವ್ಯಾಪಿಸುತ ತುಂಬಿರುವ ಜಡೆ
ಗಾನಗಳ ಕಾವ್ಯಗಳ ಶಿಲ್ಪಗಳ ಕಲೆಯ ಜಡೆ
ಎಲ್ಲವೂ ರಮ್ಯವೆಲ್ಲ !
ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ
ಕಾಣದಲ್ಲ !

# ಆಹ್ವಾನ

ಇಳಿದು ಬಾ ಓ ಬೆಳಕೆ
ನನ್ನ ಎದೆಗೆ
ಎದೆಯ ಕತ್ತಲನೆಲ್ಲ
ತೊಳೆಯ ಬಲ್ಲುದೆ ಹೇಳು
ಮರ್ತ್ಯ ದೀವಳಿಗೆ ?—

ಎಲ್ಲ ಬೆಳಕಿನ ಮೂಲ-
ವಾಗಿ ಬೆಳಗುವ ಬೆಳಕೆ
ತ್ರೈಲೋಕ್ಯ ಯಾತ್ರೆಯಲಿ
ನಿನ್ನಡಿಯ ಗುರುತುಗಳೆ
ನಕ್ಷತ್ರವಾಗಿರಲು ಮುನ್ನಡೆದ ಬೆಳಕೇ—
ಜಡತೆಯಲಿ ಚೈತನ್ಯವಂ
ಚೋದಿಸಿದ ಚೆಂಬೆಳಕೆ,
ವಿಶ್ವಸ್ಫೂರ್ತಿಯ ರಸದ ಚೆಲುವೆಯಾಗಿಹ ಬೆಳಕೆ,
ಅರಳಿಬಾ ಓ ಬೆಳಕೆ
ನನ್ನ ಒಳಗೆ !

ದಿನ ದಿನವು ತಾಯೆದೆಯ
ಮೃದು ಮಧುರ ಪ್ರೇಮದಿಂ-
ದುದ್ಭವಿಸಿ ನಸು ನಗುವ
ಹಸುಗೂಸುಗಣ್ಗಳಲಿ
ಮಿನುಗುತಿಹ ಮುದ್ದು ಬೆಳಕೇ,

ಒಲಿದೆದೆಯ ಸವಿಯೊಲ್ಮೆ-
ಗಳಲಿ ನಗೆಯಾಗಿ ಮೇಣ್
ಕಂಬನಿಯಾಗಿ ಬಿಂಬಿಸುವ
ಅನಿರ್ವಚನೀಯ ಬೆಳಕೇ
ವಿಶ್ವಕಲೆಯದ್ಭುತದ
ಕುಂಚಿಕೆಯ ವರ್ಣಕ್ಕೆ
ಪರಮ ನಿಧಿಯಾಗಿರುವ ಸ್ವರ್ಣಬೆಳಕೇ,
ಜೀವ ಜೀವಾಳದಲಿ
ಬಾಳಿನೊಳ್ಪನೆ ಬಗೆದು
ಉದ್ಧಾರ ಯೋಗದಲಿ ತೊಡಗಿರುವ ಬೆಳಕೇ,
ಮೂಡಿ ಬಾ ಓ ಬೆಳಕೆ
ನನ್ನ ಒಳಗೆ,
ಎದೆಯ ಕತ್ತಲನೆಲ್ಲ
ತೊಳೆಯ ಬಲ್ಲುದೆ ಹೇಳು
ಮರ್ತ್ಯ ದೀವಳಿಗೆ ?

# ಕಾವ್ಯಕೆ ನಮನ

ಆ ಕನಸಿನ ಮೂರ್ತಿ
ನನಸಿನೊಳೂ ತಾನಾಯಿತು ಸ್ಫೂರ್ತಿ !

ಆ ಅಮೃತದ ಬಿಂದು
ಈ ಮೊಗ್ಗಿನ ಕಣ್ಗಳ ತೊಳೆದರಳಿಸಿತಿಂದು !

ಆ ಮಂದಾರದ ಗಂಧ
ಈ ಮರ್ತ್ಯದ ಹೂಗಿಳಿಯಿತು ತುಂಬಿ ಸುಗಂಧ !

ಆನಂದದ ಸಿಂಧು
ಬಂದಿಳಿದಾಯಿತು ಸೌಂದರ್ಯದ ಬಿಂದು !

ಮನ ಗೋಡೆಯ ಸುತ್ತು
ಒಡೆಯುತ ಹುಡಿಯಾಗುತ ಬಿತ್ತು !

ನಾ ಬಯಲಲಿ ನಿಂದೆ
ಹಿರಿಯರ ಎದೆವಾಗಿಲ ಬಳಿ ಬಂದೆ !

ನನ್ನವರಾದರು ಎಲ್ಲ
ಇದು ಬಲು ಅಚ್ಚರಿಗೊಳಿಸುವುದಲ್ಲ !

ಜಗದೊಲವಿನ ನಂಟತನ
ಲಭಿಸಿತು, ಅದಕಾಗಿಯೆ ಕಾವ್ಯಕೆ ನಮನ !

# ಮೊದಲ ಚರಣಗಳು

## ಆಕಾರಾದಿ

ತ. ನೆಂ. ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು

## ನವ ಪ್ರಕಟಣೆಗಳು

### ಕಾದಂಬರಿ

ಹಂಬಲ—ಶ್ರೀ ಅಶ್ವತ್ಥ . . ೬—೦೦

### ಸಣ್ಣ ಕಥೆಗಳು

ಪ್ರೇಮ ಪ[illegible]ವಿ—ಶ್ರೀ ಭಾರತೀಸುತ . ೨—೨೫
ಜಯಂತಿ—ಶ್ರೀ ಅಶ್ವತ್ಥ . . . ೨—೦೦
ಚಿಂಬ ಹಿಡಿದ ಮೀನು—ಶ್ರೀ ಭಾರತೀಸುತ . . ೧—೫೦
ಬೆಂಕಿಯಲ್ಲಿ ಬೆಂದವಳು— ,, . . ೨—೦೦
ರಷ್ಯಾದ ಸಣ್ಣ ಕಥೆಗಳು—ಶ್ರೀ ಪ. ವಿ. ಚಂದ್ರಶೇಖರ ೨—೦೦
ಟೀ ನಂತರ ಕಪ್ಪು ಸಾಸರ್—ಶ್ರೀ [illegible]. ನಂಜರಾಜೇ ಅರಸ್ ೧—೫೦
ಶಿಲ್ಪ ಗಂಗೆ [illegible]—ಶ್ರೀ ಜಿ. ಗುಂಡಣ್ಣ . . ೨—೦೦
ಅಬ್ಬಾ ಹೀಗೂ ಉಂಟೆ?—ಶ್ರೀ ನ. ಸುಬ್ರಹ್ಮಣ್ಯ . ೨—೦೦
ಮುಟ್ಟದ [illegible] ಮತ್ತು ಇತರ ಕಥೆಗಳು .
ಎಲ್. ಎಸ್. ಶೇಷಗಿರಿ ರಾವ್ . ೧—೫೦

### ನಾಟಕಗಳು

ತಪಸ್ವಿನಿ—ಶ್ರೀಪತಿ ಭಾರತಿ . ೦—೫೦
ಮಂತ್ರಕ್ಕೆ ಮಾವಿನಕಾಯಿ—ಶ್ರೀ ನ. ಸುಬ್ರಹ್ಮಣ್ಯ . ೦—೬೨
ಮುದ್ಮಣಿ— ,, . . ೦—೭೫
ಮಾಯಾಜಾಲ— . . ೦—೭೫
ಮುನಿವಾಹನ—ಶ್ರೀ ಶಾಸ್ತ್ರಾನಂದ . ೧—೦೦
ನಟನಾಯಕ, ಒಂದಕ್ಕೆರಡು—ಶ್ರೀ ಗೋಪಾಲಕೃಷ್ಣ ಪಿ. ನಾಯಕ ೦—೭೫
ಮೂರು ನಾಟಕಗಳು—ಶ್ರೀ ಅಶ್ವತ್ಥ . . ೩—೦೦
ಹುಚ್ಚ— ,, . . ೧—೦೦
ಕಣ್ತೆರೆ— ,, . . ೧—೨೫
ಕೃಷ್ಣಲೀಲಾ ,, . . ೧—೦೦
ದುರಂತ ಮತ್ತು ಇತರ ನಾಟಕಗಳು—ಶ್ರೀ ಹೆಚ್. ಕೆ. ರಂಗನಾಥ ೧—೫೦
ವೆನಿಸ್ಸಿನ ವ್ಯಾಪಾರಿ—ಶ್ರೀ ಜಿ. ಗುಂಡಣ್ಣ . . ೨—೨೫

### ಕವಿತೆಗಳು

ಗೀತಗೋವಿಂದ—ಶ್ರೀ ಸಿ. ಬಿ. ಸೀತಾರಾಂ . ೧—೦೦

ವಾಣಿಯ ಕೃಪೆ—ಶ್ರೀ ಜಿ. ಗುಂಡಣ್ಣ . . . —೫೦
ಕುಮಾರ ಕೃಪ—ಶ್ರೀ ಕೆ. ಗೋಪಾಲಕೃಷ್ಣರಾವ್ . ೧—೫೦
ಪೂರ್ವರಾಗ—ಜಾನಕೀತನಯ . . . ೧—೦೦
ತುಂಬಿ—ಶ್ರೀ ಬಿ. ಕೃಷ್ಣಶಾಸ್ತ್ರೀ . . . ೦—೭೫
ಅರಣ್ಯಪರ್ವ ಸಂಗ್ರಹ—ಶ್ರೀ ತ. ಸು. ಶಾಮರಾಯ . ೧—೫೦
ಬಸವರಾಜದೇವರ ರಗಳೆ—ಶ್ರೀ ಟಿ. ಎಸ್. ವೆಂಕಣ್ಣಯ್ಯ ೨—೦೦
ಚೆಲುವು-ಒಲವು—ಜಿ. ಎಸ್. ಶಿವರುದ್ರಪ್ಪ . ೧—೦೦

## ಪ್ರವಾಸ ಸಾಹಿತ್ಯ

ಅಮರನಾಥ ಯಾತ್ರೆ—ಶ್ರೀ ಸೋಮನಾಥಾನಂದಜೀ . ೧—೦೦
ಹೈಮಾಚಲ ಸಾನ್ನಿಧ್ಯದಲ್ಲಿ— ,, . ೨—೦೦
ದಕ್ಷಿಣೇಶ್ವರ ದರ್ಶನ—ಶ್ರೀ. ಕೋ. ಚನ್ನಬಸಪ್ಪ . ೧—೫೦
ತಿರುಪತಿ ಯಾತ್ರೆ—ಶ್ರೀ ಕೆ. ಗೋಪಾಲಕೃಷ್ಣರಾವ್ . ೧—೫೦

## ಸಾಹಿತ್ಯ ವಿಮರ್ಶೆ

ಪ್ರಾಚೀನ ಸಾಹಿತ್ಯ—ಶ್ರೀ ಟಿ. ಎಸ್. ವೆಂಕಣ್ಣಯ್ಯ . ೧—೫೦
ಕನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು— ,, . ೨—೫೦
ಪೆಲ್ಲಿಯ ಕಾವ್ಯ ಸಮರ್ಥನೆ—ಶ್ರೀ ಜಿ. ಗುಂಡಣ್ಣ . ೧—೨೫
ಕಾವ್ಯ ಮತ್ತು ಕಾವ್ಯದ ಶಬ್ದರೀತಿ— ,, . ೦—೪೦
ನಾಣ್ ನುಡಿ—ಶ್ರೀ ಎಂ. ಮರಿಯಪ್ಪಭಟ್ಟ . . ೧—೩೫

## ಸಂಕೀರ್ಣ

ಭಾರತದ ಸೂತ್ರಧಾರ—ಶ್ರೀ ಶ್ರೀನಿವಾಸ ಅಯ್ಯಂಗಾರ್ ೧—೫೦
ವರ್ಧಾಶಿಕ್ಷಣ—ಶ್ರೀ ತ. ಸು. ಶಾಮರಾಯ . . ೨—೨೫
ನಾ ಕಂಡ ಕಲಾವಿದರು—ಶ್ರೀ ವಾಸುದೇವಾಚಾರ್ಯ . ೧—೫೦
ಋಕ್‌ಸಂಹಿತೆ—ಶ್ರೀ ಜಿ. ಎಸ್. ಚಕ್ರವರ್ತಿ . ೨—೦೦
ಸಯೋನರಾ ಜಪಾನ್—ಶ್ರೀ ಎಂ. ವೀರಪ್ಪ . ೧—೫೦
ಬಂಗಾಳದ ಸಂತಶ್ರೇಷ್ಠರು—ಶ್ರೀ ಪ್ರಣವೇಶಾನಂದಜೀ . ೨—೦೦
ಕೀಟಗಳ ಒಡನಾಡಿ ಫೇಬರ್—ಶ್ರೀಮತಿ ರುಕ್ಕಮ್ಮ . ೧—೨೫
ವಿನೋದಲಹರಿ—ಶ್ರೀ ನ. ಸುಬ್ರಹ್ಮಣ್ಯ . . ೧—೫೦
ಅವಧೂತಗೀತಾ—ಶ್ರೀ ಸೋಮನಾಥಾನಂದಜೀ . ೧—೫೦
ಅಷ್ಟಾವಕ್ರಗೀತಾ— ,, . ೧—೫೦
ಇರುವೆಯ ಕಥೆ—ಶ್ರೀ ಪ. ವಿ. ಚಂದ್ರಶೇಖರ . ೧—೫೦